# ನವಜೀವನ ಗ್ರಂಥಭಾಂಡಾರ,
# ಧಾರವಾಡ

## ಪ್ರಕಟವಾದ ಗ್ರಂಥಗಳು

(೧) ಆಕಾಶದೊಳಗಿನ ಅದ್ಭುತ ಚಮತ್ಕಾರಗಳು
ಪ್ರೊ. ತಿರುಮಲರಾವ ಪಾಟೀಲ ಎಂ. ಎ.
ಒಟ್ಟು ಪುಟ ೧೧೨
ಬೆಲೆ ೧-೨-೦

(೨) ಧರ್ಮಸಂಭವ ಅಥವಾ ಧರ್ಮದ ಮೂಲ ತತ್ವಗಳು- ಪಂಡಿತ ತಾರಾನಾಥರಾಯರು
ಒಟ್ಟು ಪುಟ ೧೪೮
ಬೆಲೆ ೧ ೪-೦

(೩) ಹಿಂದುಸ್ಥಾನದ ಪ್ರಾಚೀನ ರಾಜ್ಯಪದ್ಧತಿಗಳು. ಶ್ರೀ. ವಿಷ್ಣು ಹರಿ ಒಡೇರ ಎಂ. ಎ. ಎಲ್‌ಎಲ್. ಬಿ.
ಬೆಲೆ ೧-೨-೦

## ಮುಂದಿನ ಗ್ರಂಥಗಳು

(೪) ಖಾದೀ ಶಾಸ್ತ್ರ- ಶ್ರೀ ಮಂಜಪ್ಪಾ ಹರ್ಡೇಕರ

(೫) ಹಿಂದುಸ್ಥಾನದ ಆರ್ಥಿಕ ಅವನತಿ- ಶ್ರೀ. ಗುರುರಾವ ವಾಳವೇಕರ ಬಿ. ಎ. ಎಲ್ ಎಲ್ ಬಿ.

(೬) ಶಾರದೆಯ ಸಂಸಾರ ಅಥವಾ ಭಾಷಾಶಾಸ್ತ್ರ ಪ್ರೊ. ಆರ್. ವ್ಹಿ. ಜಹಾಗೀರದಾರರು

**ಆಲೂರ ವೆಂಕಟರಾಯ,**
ಸಂಪಾದಕ.

ನವಜೀವನ ಗ್ರಂಥಭಾಂಡಾರ, ಗ್ರಂಥ ೩.

# ಹಿಂದುಸ್ಥಾನದ
# ಪ್ರಾಚೀನ ರಾಜ್ಯಪದ್ಧತಿಗಳು

ಪರತಂತ್ರಃ ಸದಾ ರಾಜಾ ಸ್ವಲ್ಪೇ ಸೋಽಪಿ ಪ್ರಸಜ್ಯತೇ
ಸಂಧಿವಿಗ್ರಹಯೋಗೇ ಚ ಕುತೋ ರಾಜ್ಞಃ ಸ್ವತಂತ್ರತಾ ॥

* * * *

ಮಂತ್ರೇ ಚಾಮಾತ್ಯಸಹಿತೇ ಚ ಕುತಸ್ತಸ್ಯ ಸ್ವತಂತ್ರತಾ ॥

ಶಾಂತಿಪರ್ವ ಅ. ೩೨೫. ಶ್ಲೋ. ೧೩೯—೧೪೦

ಗ್ರಂಥಕರ್ತರು:

**ಶ್ರೀ. ವಿಷ್ಣು ಹರಿ ಒಡೆಯರ,** ಎಂ. ಎ. ಎಲ್‌ಎಲ್. ಬಿ.

Member Of the International Congress of
orientalists ( Oxford ).

ಚಿಕ್ಕೋಡಿ.

ಸಂಪಾದಕರು ಮತ್ತು ಪ್ರಕಾಶಕರು:

**ಶ್ರೀ. ಆಲೂರ ವೆಂಕಟರಾಯರು,** ಬಿ. ಎ. ಎಲ್‌ಎಲ್. ಬಿ.

ಧಾರವಾಡ.

(ಧಾರವಾಡ ನವಜೀವನ ಸಂಘದ ಪರವಾಗಿ)

ಬೆಲೆ ೧-೭-೦] [೧೯೩೧

ಶ್ರೀ

# ಸಂಪಾದಕರ ಮುನ್ನುಡಿ




ರಮಾತ್ಮನ ಕೃಪೆಯಿಂದ ನವಜೀವನ ಗ್ರಂಥಭಾಂಡಾರದ ಈ ೩ನೆಯ ಗ್ರಂಥವು ಈಗ ಪ್ರಕಟವಾಗಿದೆ. ಶ್ರೀ. ವಿಷ್ಣು ಹರಿ ಒಡೆಯರ ಇವರು ಈ ಗ್ರಂಥದ ಮೂಲ ಕರ್ತರು. ಅವರು ಚಿಕ್ಕೋಡಿ ನಿವಾಸಿಗಳಾಗಿದ್ದು ಅಲ್ಲಿ ಅವರು ವಕೀಲಿಯನ್ನು ಮಾಡುತ್ತಿರುವರು. ಆದರೂ ಅವರು ಸಂಶೋಧನದ ಕಾರ್ಯದಲ್ಲಿಯೇ ತಮ್ಮ ಬಹುಶಃ ಎಲ್ಲ ಕಾಲವನ್ನು ಕಳೆಯುತ್ತಿರುವರು. ಅವರಿಗೆ ಕನ್ನಡವನ್ನು ಮಾತಾಡಲಿಕ್ಕೆ ಬರುತ್ತಿದ್ದರೂ, ಚಿಕ್ಕಂದಿನಲ್ಲಿಯ ಶಿಕ್ಷಣವೆಲ್ಲವೂ ಮುಂಬಯಿಯಲ್ಲಾದುದರಿಂದ ಅವರಿಗೆ ಕನ್ನಡದ ವಾಙ್ಮಯ ಭಾಷೆಯನ್ನು ಬರೆಯಲು ಬರುವುದಿಲ್ಲ. ಅವರು ಬರೆದು ಕೊಟ್ಟ ಟಿಪ್ಪಣಿಗಳಿಂದ ನಾವು ಇದನ್ನು ಕನ್ನಡಿಗರಿಗೋಸ್ಕರ ಬರೆದಿರುವೆವು. ಆದಕಾರಣ, ಇದರಲ್ಲಿ ದೋಷಗಳಿದ್ದರೆ ಅವಕ್ಕೆ ನಾವು ಹೊಣೆಗಾರರು, ಗುಣಗಳಿಗೆ ಅರ್ಥಾತ್ ಅವರು ಹಕ್ಕುದಾರರು.

ಧರ್ಮಸಂಭವವೆಂಬ ೨ ನೆಯ ಗ್ರಂಥದ ವಿಷಯವೂ ಗಹನ; ಭಾಷೆಯೂ ಗಂಭೀರ. ಈ ಹಿಂದುಸ್ಥಾನದ ಪ್ರಾಚೀನ ರಾಜ್ಯಪದ್ಧತಿಗಳು ಎಂಬ ಗ್ರಂಥದ ವಿಷಯವು ಲೋಕಪ್ರಿಯ. ಆದಕಾರಣ ಇದರ ಭಾಷೆಯನ್ನೂ ಅತಿ ಸುಲಭವಾಗಿ ಮಾಡಲು ಯತ್ನಿಸಿರುವೆವು.

ಈ ಸಂದರ್ಭದಲ್ಲಿ ನವಜೀವನ ಗ್ರಂಥಭಾಂಡಾರದ ಉದ್ದೇಶದ ವಿಷಯವಾಗಿಯೂ ಈಗಾಗಲೆ ಪ್ರಕಟವಾಗಿರುವ ಎರಡು ಗ್ರಂಥಗಳ ವಿಷಯವಾಗಿಯೂ ಒಂದೆರಡು ಮಾತುಗಳನ್ನು ಹೇಳುವುದು ಅವಶ್ಯವೆಂದು ತೋರುತ್ತಿದೆ. ಗ್ರಂಥಭಾಂಡಾರದ ಉದ್ದೇಶವು ಕೇವಲ ವಿದ್ಯಾರ್ಥಿಗಳಿಗೋಸ್ಕರ ಟೆಕ್ಸ್ಟ ಪುಸ್ತಕಗಳನ್ನು ತಯಾರಿಸುವುದೂ ಅಲ್ಲ; ಅಥವಾ ಇಂಗ್ಲಿಷಿನಲ್ಲಾಗಲಿ ಸಂಸ್ಕೃತದಲ್ಲಾಗಲಿ ಇರತಕ್ಕ ಅನೇಕ ಗ್ರಂಥಗಳನ್ನೋದಿಕೊಂಡು ವಿಷಯಗಳನ್ನು ಪರಿಚಿತವಾಗಿ

ಮಾಡಿಕೊಂಡವರ ಸಲುವಾಗಿ ಗ್ರಂಥಗಳನ್ನು ಪ್ರಕಟಿಸುವುದೂ ಅಲ್ಲ. ಕನ್ನಡ ಭಾಷೆಯಲ್ಲಿ ಗಹನ ವಿಷಯಗಳ ಮೇಲೆ ವಿಶೇಷ ಗ್ರಂಥಗಳೇ ಇಲ್ಲದಿರುವ ಕೊರತೆಯನ್ನು ಅಲ್ಪಮಟ್ಟಿಗೆ ದೂರಮಾಡುವದೂ, ಶಾಸ್ತ್ರೀಯ, ಐತಿಹಾಸಿಕ ಮುಂತಾದ ವಿಷಯಗಳ ಮೇಲಿನ ಇಂದಿನ ವರೆಗಿನ ಜ್ಞಾನವನ್ನು ಅತಿಸಂಕ್ಷೇಪವಾಗಿ ಸಾಮಾನ್ಯವಾಚಕರಿಗೋಸ್ಕರ ಸುಲಭವಾಗಿ ಇಡುವುದೂ ಈ ಗ್ರಂಥಮಾಲೆಯ ಉದ್ದೇಶಗಳಾಗಿರುತ್ತವೆಂಬುದನ್ನು ಯಾರೂ ಮರೆಯಬಾರದು. ಸಾರಾಂಶ, ನಮ್ಮ ಧ್ಯೇಯವು ಬಹಳ ದೊಡ್ಡದಲ್ಲ, ಚಿಕ್ಕದು. ಈ ಧ್ಯೆಯವನ್ನಿಟ್ಟುಕೊಂಡು ಹೊರಟ ಗ್ರಂಥಮಾಲೆಗಳು ನಮ್ಮ ದೇಶದಲ್ಲಿ ಇಲ್ಲದಿರುವುದರಿಂದಲೂ ಕರ್ನಾಟಕದ ಸಾಮಾನ್ಯ ಜನತೆಯ ಮಟ್ಟು ಎಲ್ಲ ಭಾಗಗಳಲ್ಲಿಯೂ ಒಂದೇ ಸಮನಾಗಿಲ್ಲದಿರುವುದರಿಂದಲೂ ಇದನ್ನು ನಡಿಸುವುದರಲ್ಲಿ ನಮ್ಮಿಂದ ಅನೇಕ ತಪ್ಪುಗಳಾಗಬಹುದು. ಅಲ್ಲದೆ, ನಮ್ಮ ಅಲ್ಪ ಯೋಗ್ಯತೆಯ ಮೂಲಕವೂ ಸಲಕರಣೆಗಳು ಸಾಕಷ್ಟು ಇಲ್ಲದಿರುವ ಮೂಲಕವೂ ಕೂಡ ಅನೇಕ ದೋಷಗಳುಂಟಾಗಬಹುದು. ಆದರೆ, ನಾವು ನಮ್ಮ ಉದ್ದೇಶವನ್ನು ಲಕ್ಷದಲ್ಲಿಟ್ಟು ನಮ್ಮ ಕೈಲಾದಮಟ್ಟಿಗೆ ದೋಷಗಳನ್ನು ದೂರ ಮಾಡುವುದಕ್ಕೆ ಪ್ರಯತ್ನಿಸುತ್ತೇವೆಂದು ಆಶ್ವಾಸನ ಕೊಡುತ್ತೇವೆ. ಆದಕಾರಣ, ಓದುಗರೆಲ್ಲರೂ ನಮಗೆ ಆ ವಿಷಯದಲ್ಲಿ ಸಲಹೆಗಳನ್ನು ಕೊಡಬೇಕೆಂದು ಬೇಡಿಕೊಳ್ಳುತ್ತೇವೆ.

ಆಕಾಶದೊಳಗಿನ ಅದ್ಭುತ ಚಮತ್ಕಾರಗಳ ಸಂಬಂಧವಾಗಿ ಎರಡು ತರಹದ ಟೀಕೆಗಳು ಬಂದಿವೆ. (೧) ಕಠಿಣವಾಗಿದೆಯೆಂದು ಕೆಲವರು (೨) ವಿಶೇಷ ಜ್ಞಾನವನ್ನು ಕೊಡದೆ ತೀರ ಸುಲಭವಾಗಿದೆಯೆಂದು ಕೆಲವರು. ಮೇಲ್ಕಾಣಿಸಿದ ನಮ್ಮ ಉದ್ದೇಶಗಳನ್ನು ಲಕ್ಷಕ್ಕೆ ತಂದರೆ ಈ ತರಹದ ಟೀಕೆಗೆ ಆಸ್ಪದ ಉಳಿಯುವುದಿಲ್ಲ. ಆ ಪುಸ್ತಕದಲ್ಲಿ ಜ್ಯೋತಿಃಶಾಸ್ತ್ರ ವಿಷಯಕ ಇಂದಿನ ವರೆಗಿನ ಯಾವತ್ತು ಜ್ಞಾನವನ್ನು ಸಂಗ್ರಹಿಸಿ ಕೊಡುವುದೇ ಮುಖ್ಯ ಉದ್ದೇಶವಾಗಿತ್ತು. ತತ್ವವಿವೇಚನೆಯಿಂದ ವಾಚಕರನ್ನು ಬೇಸರಗೊಳಿಸದೆ, ಕೊನೆಯ ಸಿದ್ಧಾಂತಗಳು ಅದರಲ್ಲಿ ಮನೋರಂಜಕವಾಗಿ ಹೇಳಲ್ಪಟ್ಟಿವೆ. ಇಂಗ್ಲಿಷ ಭಾಷೆಯೊ

ಳಗಿನ ಈ ಮಾದರಿಯ ಅನೇಕ ಗ್ರಂಥಗಳಿಗೂ ಈ ಗ್ರಂಥಕ್ಕೂ ತುಲನೆ ಮಾಡಿ ಪರೀಕ್ಷಿಸಿದರೆ, ಅವುಗಳೊಳಗಿನ ಯಾವ ಮಹತ್ವದ ವಿವರವೂ ಬಿಡಲ್ಪಟ್ಟಿಲ್ಲವೆಂಬುದು ಗೊತ್ತಾಗುವುದು. ಎರಡನೆಯ ಗ್ರಂಥವಾದ ಧರ್ಮಸಂಭವದ ವಿಷಯವು ಗಹನವಾದುದು, ಗ್ರಂಥ ಕರ್ತರ ವಿವೇಚನಾಪದ್ಧತಿಯೂ ವಿಚಾರಗಳೂ ಸ್ವತಂತ್ರವಾದವುಗಳು. ಅವುಗಳಲ್ಲಿಯ ಅನೇಕ ವಿಚಾರಗಳ ಬಗ್ಗೆ ಮತಭೇದವೂ ಇರಬಹುದು. ಆದರೆ ತರ್ಕಬದ್ಧ ವಿಚಾರಗಳಿದ್ದರೆ ತೀರಿತು, ಯಾವ ಪ್ರೌಢವಿಚಾರ ಗಳನ್ನೂ ಹತ್ತಿಡುವುದು ಸಂಪಾದಕರ ಕರ್ತವ್ಯವಲ್ಲ. ಪಂಡಿತ ತಾರಾ ನಾಥರಾಯರಂಥ ಪ್ರತಿಭಾಯುಕ್ತ ಗ್ರಂಥಕರ್ತರ ವಿಚಾರಗಳ ಬಗ್ಗೆ ಎಷ್ಟೇ ಮತಭೇವಿದ್ದರೂ ಅವರ ವಿಚಾರಗಳು ಮನನೀಯವಾಗಿಯೇ ಇವೆಂಬುದು ಈಗ ವಾಚಕರಿಗೆ ಗೊತ್ತಾಗಿರಬಹುದು. ಈ ಮೂರನೆಯ ಗ್ರಂಥವು ಈಗಿನ ಕಾಲಕ್ಕೆ ಬಹಳ ಉಪಯುಕ್ತವಾದುದು. ಹೀಗೆ ಒಂದೊಂದು ಗ್ರಂಥವು ಒಂದೊಂದು ಹೊಸ ದೃಷ್ಟಿಯಿಂದ ಬರೆಯಿಸಲ್ಪ ಡುವುದು. ಗ್ರಂಥಕರ್ತರು ಅನೇಕರಾಗಿರುವುದರಿಂದ ಅರ್ಥಾತ್ ಈ ಗ್ರಂಥಗಳ ಶೈಲಿಗಳೂ ಭಿನ್ನವಾಗುವುದು ಸ್ವಾಭಾವಿಕವೇ ಆಗಿದೆ. ಪ್ರಥಮ ಪ್ರಯತ್ನವೆಂಬ ದೃಷ್ಟಿಯಿಂದ, ಎಲ್ಲರೂ ಸಹಾನುಭೂತಿಯಿಂದ ನೋಡಿ, ಸಲಹೆಗಳನ್ನು ಅವಶ್ಯವಾಗಿ ಕೊಡಬೇಕು.

೨ನೆಯ ಗ್ರಂಥದ ಕೊನೆಗೆ, ಆಶ್ರಯದಾತರೇ ಮುಂತಾದವರ ಹೆಸರುಗಳನ್ನು ಕೊಟ್ಟೇ ಇರುವೆವು. ಈ ಗ್ರಂಥದ ಮುದ್ರಣಕ್ಕೆ ಶ್ರೀ. **ಮುದವೇಡಕರ ವೆಂಕಟರಾಯರು ೧೦೦ ರೂಪಾಯಿಗಳನ್ನು** ಕೊಟ್ಟು ಸಹಾಯ ಮಾಡಿದುದಕ್ಕಾಗಿ ಅವರಿಗೆ ನಾವು ಋಣಿಯಾಗಿರು ವೆವು. ೨ನೆಯ ಗ್ರಂಥದಲ್ಲಿ ಮುದ್ರಿಸಿದ ಹೆಸರುಗಳಲ್ಲಿ ಸುಮಾರು ೫೦ ಗೃಹಸ್ಥರು ವ್ಹಿ. ಪಿ. ಯನ್ನು ಸ್ವೀಕರಿಸಿರುವುದಿಲ್ಲ. ಅವರ ಹೆಸರುಗ ಳನ್ನು ಇಲ್ಲಿ ಮುದ್ರಿಸುವುದಿಲ್ಲ. ಇತ್ತೀಚೆಗೆ ಹೊಸತಾಗಿ ಆದ ಆಶ್ರಯ ದಾತರೇ ಮುಂತಾದವರ ಹೆಸರುಗಳನ್ನು ಕೊನೆಗೆ ಮುದ್ರಿಸಿರುವೆವು.

ಧಾರವಾಡ
೨೮-೧೨-೧೯೩೧

**ಆಲೂರ ವೆಂಕಟರಾಯ**

ಶ್ರೀ

# ಗ್ರಂಥಕರ್ತರ ಪ್ರಸ್ತಾವನೆ

ಹಿಂದುಸ್ಥಾನದ ಪ್ರಾಚೀನ ರಾಜ್ಯಪದ್ಧತಿಗಳನ್ನು ಕುರಿತು ಈಗ ಉಪಲಬ್ಧವಾಗಿರುವ ವಿವರಗಳೆಲ್ಲವನ್ನೂ ಸಂಕ್ಷೇಪದಿಂದ ತಿಳಿಸುವುದೇ ಈ ಗ್ರಂಥದ ಉದ್ದೇಶವು. ಆಗಿನ ಕಾಲದ ರಾಜಕೀಯ ಕಲ್ಪನೆಗಳನ್ನೂ ಸ್ವಲ್ಪಮಟ್ಟಿಗೆ ವಿವರಿಸಲಾಗಿದೆ; ಮತ್ತು ಕೌಟಿಲ್ಯನ ಅರ್ಥಶಾಸ್ತ್ರದ ಆಧಾರದಿಂದ ಆಗಿನ ಕಾಲದ ಮುಲಕಿ ಮತ್ತು ಲಷ್ಕರಿ ಶಾಖೆಗಳನ್ನು ಕುರಿತು ಕೆಲವು ಸಂಗತಿಗಳನ್ನು ಕೊಟ್ಟಿರುವೆವು. ಇದರಲ್ಲಿ ಅನೇಕ ನ್ಯೂನತೆಗಳಿರುವವೆಂಬುದು ನಮಗೆ ಗೊತ್ತುಂಟು. ಈ ವಿಷಯವನ್ನು ಚೆನ್ನಾಗಿ ತಿಳಿಸಿ ಹೇಳುವುದಕ್ಕೆ ನಾವು ಎಷ್ಟು ಅನರ್ಹರೆಂಬುದೂ ನಮಗೆ ಗೊತ್ತು. ಈಗಿನ ಕಾಲದಲ್ಲಿ ಪ್ರತಿಯೊಬ್ಬನ ತಲೆಯಲ್ಲಿರುವ ಅನೇಕ ತರಹದ ರಾಜಕೀಯ ಸಂದೇಹಗಳಿಗೆ ಇದರಿಂದ ಸಾಮಾನ್ಯತಃ ಉತ್ತರವು ದೊರೆತು, ಈ ವಿಷಯವನ್ನು ಹೆಚ್ಚು ಸೂಕ್ಷ್ಮವಾಗಿಯೂ ವಿವರವಾಗಿಯೂ ಅಭ್ಯಾಸಮಾಡುವುದಕ್ಕೆ ಅವರಿಗೆ ಇದು ಚಾಲನವನ್ನು ಕೊಟ್ಟರೆ ನಾವು ಕೃತಕೃತ್ಯರಾದೆವೆಂದು ಭಾವಿಸುತ್ತೇವೆ. ಈ ಗ್ರಂಥದಲ್ಲಿ ನಾವು ನಮ್ಮ ಸ್ವಂತ ವಿಚಾರಗಳನ್ನು ವಿಶೇಷವಾಗಿ ಕೊಟ್ಟಿರುವುದಿಲ್ಲ. ಪ್ರಾಚೀನ ರಾಜ್ಯಪದ್ಧತಿಯ ಬಗ್ಗೆ ಸ್ವತಂತ್ರವಾದ ಶೋಧಗಳನ್ನು ಹೇಳುವುದು ಈ ಗ್ರಂಥದ ಉದ್ದೇಶವಿರದೆ, ಸಾಮಾನ್ಯ ವಾಚಕರಿಗೋಸ್ಕರ, ಸ್ವಲ್ಪದರಲ್ಲಿ ಹಿಂದಿನ ರಾಜ್ಯಪದ್ಧತಿಗಳ ಬಗೆ ಕಲ್ಪನೆಯನ್ನು ಮಾಡಿಕೊಡುವುದೇ ನಮ್ಮ ಮುಖ್ಯ ಉದ್ದೇಶವು. ಪಾರಿಭಾಷಿಕ ಶಬ್ದಗಳಲ್ಲಿ ಕೆಲವುಗಳನ್ನು ಅಲ್ಲಲ್ಲಿ ತಿಳಿಸಿಹೇಳಿಯೇ, ಇರುವೆವು. ಆದರೂ ಕೊನೆಗೆ ಕೆಲವು ಶಬ್ದಗಳನ್ನು ಕೊಟ್ಟು ಒಂದು ಕೋಶವನ್ನು ಜೋಡಿಸಿರುವೆವು. ಮತ್ತು ಪ್ರಾಚೀನ ರಾಜ್ಯಗಳನ್ನು ತೋರಿಸುವ ಮೂರು ನಕಾಶಗಳನ್ನು ಕೊಟ್ಟಿರುವೆವು.

ಚಿಕ್ಕೋಡಿ
೨೫—೧೨—೩೧ } ವಿಷ್ಣು ಹರಿ ಒಡೆಯರ

## ಹಿಂದುಸ್ಥಾನದ ಪ್ರಾಚೀನ ರಾಜ್ಯಪದ್ಧತಿಗಳು

# ಅನುಕ್ರಮಣಿಕೆ




ಶ್ರೀ. ವಿಷ್ಣು ಹರಿ ಒಡೆಯರ
ಎಂ. ಎ. ಎಲ್‌ಎಲ್. ಬಿ.

# ಹಿಂದುಸ್ಥಾನದ ಪ್ರಾಚೀನ ರಾಜ್ಯಪದ್ಧತಿಗಳು.



## ೧ನೆಯ ಪ್ರಕರಣ

## ಆಕ್ಷೇಪ—ಉತ್ತರ

ಹಿಂದುಸ್ಥಾನದ ಜನರ ವಿಷಯವಾಗಿ ಪರಕೀಯರಲ್ಲಿ ಅನೇಕ ತಪ್ಪು ಕಲ್ಪನೆಗಳು ಬೇರೂರಿರುತ್ತವೆ. ಅವುಗಳಲ್ಲಿ ಎಲ್ಲಕ್ಕೂ ಹೆಚ್ಚಿನ ಮತ್ತು ಹಿಂದೀ ಜನರಿಗೆ ಎಲ್ಲಕ್ಕೂ ಘಾತಕವಾದ ಕಲ್ಪನೆಯೆಂದರೆ, ಹಿಂದೀ ಜನರು ಸ್ವರಾಜ್ಯವನ್ನು ಗಳಿಸುವುದಕ್ಕೂ ನಡಿಸುವುದಕ್ಕೂ ಹುಟ್ಟಾ ಅನರ್ಹರು- ಎಂಬುದು. ಈ ಕಲ್ಪನೆಯನ್ನು ಅವರು ಬುದ್ಧಿ ಪೂರ್ವಕವಾಗಿಯಾಗಲಿ ಅಬುದ್ಧಿಪೂರ್ವಕವಾಗಿಯಾಗಲಿ ನಮ್ಮ ಜನರ ತಲೆಯಲ್ಲಿ ಸೇರಿಸಿರುವರು, ಅವರು ಅದನ್ನು ಸತತವಾಗಿ ನಮ್ಮ ಕಿವಿಗಳಲ್ಲಿ ಊದಿರುವರು. ಅದರ ಪರಿಣಾಮವು ಏನಾಗಿರುವುದೆಂದರೆ, ನಮಗೇ ನಮ್ಮಲ್ಲಿ ವಿಶ್ವಾಸವು ಹಾರಿ ಹೋಗಿದೆ. ಆದುದರಿಂದ 'ನಾವು ಸ್ವರಾಜ್ಯಕ್ಕೆ ಅನರ್ಹರು' ಎಂದು ನಾವೂ ಅನ್ನ ಹತ್ತಿದ್ದೇವೆ. ಅವರು ನಮ್ಮ ಮೇಲೆ ಹೊರಿಸುವ ಮುಖ್ಯ ಆಕ್ಷೇಪಗಳೆಂದರೆ, ಈ ದೇಶದಲ್ಲಿ ರಾಜನು ಸರ್ವತಂತ್ರ ಸ್ವತಂತ್ರನು; ಆತನು ಹೇಳಿದ್ದೇ ಮಟ್ಟ, ಕಟ್ಟಿದ್ದೇ ಪಟ್ಟ; ಪೃಥ್ವಿಪತಿಯು ಸಾಕ್ಷಾತ್ ವಿಷ್ಣುಸ್ವರೂಪನಾದುದರಿಂದ, ದೇವರಂತೆ ಆತನನ್ನು ಅನನ್ಯಭಾವದಿಂದ ಭಜಿಸುವುದೊಂದೇ ಪ್ರಜೆಗಳ ಕರ್ತವ್ಯ; ಆತನ ಆಜ್ಞೆಯ ವಿರುದ್ಧ ಪ್ರಜೆಗಳು ಒಂದು ತುಟಿ ಎರಡು ಮಾಡಕೂಡದು; ಹಿಂದೀ

ಜನರಿಗೆ ಪ್ರಜೆಗಳ "ಹಕ್ಕು" ಗಳ ಕಲ್ಪನೆಯೇ ಇಲ್ಲ; ರಾಜ್ಯ ಶಾಸನ ಪದ್ಧತಿಯಲ್ಲಿ ಅವರಿಗೆ ಯಾವ ಬಗೆಯ ಅಂಗವೂ ಇದ್ದಿಲ್ಲ; ಇಲ್ಲಿಯ ಜನರಿಗೆ ಏಕತಂತ್ರವಾದ ಅರಸುತನದ ರಾಜ್ಯಪದ್ಧತಿಯೊಂದು ಹೊರ್ತು ಮಿಕ್ಕ ರಾಜ್ಯಪದ್ಧತಿಗಳು ಗೊತ್ತಿರಲಿಲ್ಲ; ಪ್ರಜಾಸತ್ತಾತ್ಮಕ ರಾಜ್ಯಪದ್ಧತಿಗಳ ಅರಿವು ಕೂಡ ಅವರಿಗೆ ಇರಲಿಲ್ಲ; ರಾಜ್ಯಯಂತ್ರದಲ್ಲಿ ವ್ಯವಸ್ಥಿತವಾದ ವಿಭಾಗಗಳಿರಲಿಲ್ಲ; ರಾಜ್ಯವನ್ನಾಳುವವನು ಯಾವನೊಬ್ಬ ವಂಶಪರಂಪರಾಗತ ಪುರುಷನಿರಲಿ, ಪುಂಡಪಾಳೆಯಗಾರನಾಗಿರಲಿ, ಅಥವಾ ರಾಜ್ಯವನ್ನು ಒತ್ತಾಯದಿಂದ ಅಪಹರಿಸಿದವನಿರಲಿ ರಾಜ್ಯಕ್ಕೆ ಆತನು ಅಧಿಪತಿಯಾದೊಡನೆ ಆತನಲ್ಲಿ ದೇವಾಂಶವು ಸೇರುವುದರಿಂದ ಆತನು ಪೂಜಾರ್ಹನಾಗುತ್ತಾನೆ; ಈ ದೇಶದಲ್ಲಿ ಅರಸನು ಯಾವಾಗಲೂ ವಂಶಪರಂಪರಾಗತ ಅರಸನು; ಆದುದರಿಂದ, ಆತನ ಮಗನು ಅಥವಾ ಮೊಮ್ಮಗನು ರಾಜ್ಯವಾಳಲಿಕ್ಕೆ ಅರ್ಹನಿರಲಿ, ಅನರ್ಹನಿರಲಿ, ಆತನನ್ನೇ ಪಟ್ಟಕ್ಕೆ ಕುಳ್ಳಿರಿಸಿ, ಆತನ ಆಜ್ಞೆಗಳನ್ನು ಪರಿಪಾಲಿಸುವುದೇ ಪ್ರಜೆಗಳ ಕರ್ತವ್ಯ; ಅರಸನನ್ನು ಪಟ್ಟದಿಂದ ತಳ್ಳುವ ಅಧಿಕಾರವಾಗಲಿ, ಆತನ ವಂಶಜರ ಬದಲು ಮತ್ತೊಬ್ಬನನ್ನು ಪಟ್ಟಕ್ಕೆ ಕುಳ್ಳಿರಿಸುವ ಅಧಿಕಾರವಾಗಲಿ ಪ್ರಜೆಗಳಿಗೆ ಇರಲಿಲ್ಲ; ನ್ಯಾಯದಾನ ಪದ್ಧತಿ ಅಥವಾ ಕಾಯದೆರಚನಾ ಪದ್ಧತಿಯು ಬಹಳ ಹೀನವಾಗಿತ್ತು; ಪ್ರಜೆಗಳಿಂದ ಅರಸನು ಮನ ಬಂದಂತೆ ಕರಗಳನ್ನು ಸೆಳೆದುಕೊಳ್ಳುತ್ತಿದ್ದನು; ಮತ್ತು ಮನ ಬಂದಂತೆ ಉಪಯೋಗಿಸುತ್ತಿದ್ದನು; ದೇಶದೊಳಗಿನ ಯಾವತ್ತು ಭೂಮಿಗೆ ಅರಸನು ಒಡೆಯನು; ಪ್ರಜೆಗಳು ಕೇವಲ ಆತನ ಅನುಮತಿಯಿಂದ ಹೊಲಗಳನ್ನು ಮಾಡುವ ರೈತರು, ಎಂದು ಆಗಿನ ಕಾಲದ ಭಾವನೆ ಇತ್ತು; ಸಾರಾಂಶ, ಒಟ್ಟಿನ ಮೇಲೆ, ಈ ದೇಶದಲ್ಲಿಯ ರಾಜ್ಯಪದ್ಧತಿಗಳು ಬಹಳ ಅವ್ಯವಸ್ಥಿತವಾದ ಸ್ಥಿತಿಯಲ್ಲಿದ್ದವು- ಇವೇ ಮುಂತಾದ ಆಕ್ಷೇಪಗಳಿಗೆ ವಿಸ್ತಾರವಾಗಿಯೂ ಸಾಧಾರವಾಗಿಯೂ ಉತ್ತರ ಕೊಡುವುದು ಅವಶ್ಯವಿದೆ. ಆ ಬಗೆಯಾಗಿ ನಮ್ಮ ಅನೇಕ ಪಂಡಿತರು ಉತ್ತರಗಳನ್ನು ಕೊಟ್ಟಿರುವರು. ಅವೆಲ್ಲವುಗಳ ಸಾರವನ್ನು

ಸಂಗ್ರಹಿಸಿ, ಸಾಮಾನ್ಯ ವಾಚಕರಿಗೋಸ್ಕರ ನಾವು ಇಲ್ಲಿ ಆದಷ್ಟು ಮಟ್ಟಿಗೆ ಸಂಕ್ಷೇಪವಾಗಿ- ಆದರೂ ಸ್ಪಷ್ಟವಾಗಿ ನಮ್ಮ ಪ್ರಾಚೀನ ಕಾಲದ ರಾಜ್ಯಪದ್ಧತಿಗಳನ್ನು ವಿವರಿಸಿ ಹೇಳುವೆವು. ಆದರೆ ಮುಂಚೆ, ಓದುಗರ ಸುಲಭ ಅವಗಾಹನೆಗಾಗಿ ಮೇಲ್ಕಾಣಿಸಿದ ಆಕ್ಷೇಪಗಳಿಗೆ ನಮ್ಮ ಪಂಡಿತರು ಕೊಟ್ಟಿರುವ ಉತ್ತರದ ಸಾರಾಂಶವನ್ನು ಇಲ್ಲಿ ಕೊಡುತ್ತೇವೆ.

ಆ ಉತ್ತರದ ಸಾರಾಂಶವು ಹೀಗೆ ಇದೆ. ಪರಕೀಯರು ನಮ್ಮ ವಿಷಯವಾಗಿ ತೆಗೆಯುತ್ತಿರುವ ಈ ಆಕ್ಷೇಪಗಳಲ್ಲಿ ಹುರುಳಿಲ್ಲ. ನಮ್ಮ ಜನರಿಗೆ ಪುರಾತನ ಕಾಲದಿಂದಲೂ ತಮ್ಮ ಹಕ್ಕುಗಳಾವುವೆಂಬುದು ಚೆನ್ನಾಗಿ ಗೊತ್ತಿತ್ತು. ಇಷ್ಟೇ ಅಲ್ಲ, ಮುಂಚೆ ಮುಂಚೆ ಅವರಿಗೆ ಅರಸನೆಂಬುದೇ ಗೊತ್ತಿರಲಿಲ್ಲ. ಮೊತ್ತಮೊದಲು ಅವರು ರಾಜನಿಲ್ಲದೆ ತಾವೇ ರಾಜ್ಯಕಾರಭಾರವನ್ನು ನಡಿಸುತ್ತಿದ್ದರು. ರಾಜ ನಿಲ್ಲದೆ ಪ್ರಜೆಗಳಿಂದಲೇ ಆಳಲ್ಪಟ್ಟ ಅನೇಕ ರಾಜ್ಯಗಳು ನಮ್ಮ ದೇಶದಲ್ಲಿ ನೂರು ವರ್ಷ ಅಲ್ಲ, ಇನ್ನೂರು ವರ್ಷ ಅಲ್ಲ, ಸಾವಿರಾರು ವರ್ಷಗಳವರೆಗೆ ಅಸ್ತಿತ್ವದಲ್ಲಿದ್ದುವು. ಕೆಲವು ಕಡೆಗೆ ಪ್ರಜೆಗಳು ಅರಸ ನನ್ನು ಆರಿಸಿಕೊಂಡು ಆತನ ವಶಕ್ಕೆ ರಾಜ್ಯವನ್ನೊಪ್ಪಿಸಿದರೂ ಆತನನ್ನೊಬ್ಬ ಅಧಿಕಾರಿಯೆಂದೇ ತಿಳಿಯುತ್ತಿದ್ದರಲ್ಲದೆ, ಆತನು ಸರ್ವ ತಂತ್ರಸ್ವತಂತ್ರನೆಂದು ನಮ್ಮ ಜನರು ಎಂದೂ ತಿಳಿಯುತ್ತಿರಲಿಲ್ಲ. ಆತನು ದೇವಾಂಶಸಂಭೂತನೆಂಬ ತಿಳವಳಿಕೆಯು ಇತ್ತೀಚಿನದು, ಅಲ್ಲದೆ ಪಾಶ್ಚಿಮಾತ್ಯರಲ್ಲಿರುವ ಅರಸನ ದೇವಾಂಶಸಂಭೂತತ್ವದ ಕಲ್ಪನೆಗೂ ನಮ್ಮಲ್ಲಿಯ ಕಲ್ಪನೆಗೂ ಬಹಳ ಭೇದವಿದೆ. ಏಕೆಂದರೆ, ಅರಸನ್ನ ದೇವಾಂಶಸಂಭೂತನೆಂದರೆ ಆ ವ್ಯಕ್ತಿಯು ದೇವಾಂಶಸಂಭೂತನೆಂದು ನಮ್ಮ ಜನರು ತಿಳಿಯದೆ, ಆ ಪಟ್ಟವು, ಅರಸೊತ್ತಿಗೆಯ ಅಧಿಕಾ ರವು ದೇವಾಂಶಸಂಭೂತವೆಂದು ತಿಳಿಯುತ್ತಿದ್ದರು. ಮತ್ತು ಅರಸು ತನವು ಎಷ್ಟೇ ಪ್ರಬಲವಾಗಿದ್ದ ಕಾಲದಲ್ಲಿಯೂ ಆತನ ಅಧಿಕಾರಕ್ಕೆ ಮುಗದಾಣಗಳು ಇಲ್ಲದೆ ಇರಲಿಲ್ಲ. ಅಲ್ಲದೆ, ಪಾಶ್ಚಾತ್ಯ ಅರಸರಂತೆ ಆತನು ಧರ್ಮದಲ್ಲಿ ಎಂದೂ ಕೈಹಾಕುತ್ತಿರಲಿಲ್ಲ. ಅರಸನು ಅನ್ಯಾ

ಯಮಾಡಿದರೆ ಆತನನ್ನು ತಳ್ಳಿ ತಮಗೆ ಬೇಕಾದ ಮತ್ತೊಬ್ಬನನ್ನು ಆರಿಸಿಕೊಳ್ಳುತ್ತಿದ್ದರು. ಈ ದೇಶದ ಇತಿಹಾಸದಲ್ಲಿ, ಈಗಿನ ಸುಧಾರಿಸಿದ ಸಿದ್ಧಾಂತದ ಮೇರೆಗೆ ಉತ್ಕೃಷ್ಟವೆಂದೆಣಿಸಲ್ಪಡುವ ಅನೇಕ ರಾಜ್ಯಪದ್ಧತಿಗಳು ಅಸ್ತಿತ್ವದಲ್ಲಿದ್ದವು. ಈ ವಿಷಯದಲ್ಲಿ ಹಿಂದುಸ್ಥಾನವು ಅನೇಕ ತರದ ಪ್ರಯೋಗಗಳನ್ನೂ ಮಾಡಿ ನೋಡಿರುವುದು. ಅರಸನೇ ಇಲ್ಲದೆ ಕೇವಲ ಪ್ರಜೆಗಳೇ ಒಟ್ಟಾಗಿ ನಡಿಸಿದ ರಾಜ್ಯಪದ್ಧತಿಗಳೂ ಇದ್ದವು; ಪ್ರಜೆಗಳು ತಮ್ಮ ಪ್ರತಿನಿಧಿಗಳ ಮೂಲಕವಾಗಿ ನಡಿಸಿದ ರಾಜ್ಯಪದ್ಧತಿಗಳೂ ಇದ್ದವು; ಅಲ್ಪಸ್ವಲ್ಪ ಮಹಾಜನರಿಂದ ನಡಿಸಲ್ಪಟ್ಟ ರಾಜ್ಯಪದ್ಧತಿಗಳೂ ಇದ್ದವು; ಸುನಿಯಂತ್ರಿತನಾದ ಅರಸನಿಂದ ಆಳಲ್ಪಟ್ಟ ರಾಜ್ಯಪದ್ಧತಿಗಳೂ ಇದ್ದವು. ಅರಸನಿಗೆ ಕರಗಳನ್ನು ಕೊಡುವುದು ಆತನ ಸ್ವಚ್ಛಂದದ ಸಲುವಾಗಿ ಇರದೆ ಪ್ರಜೆಗಳಿಗೆ ಹಿತವಾಗುವ ಕಾರ್ಯಗಳನ್ನು ಮಾಡುವ ಸಲುವಾಗಿ ಇರುತ್ತದೆಂಬ ಮಾತು ನಮ್ಮ ಜನರಿಗೆ ಸ್ಪಷ್ಟವಾಗಿ ತಿಳಿದಿತ್ತು. ಪ್ರಜಾಸಂಸ್ಥೆಗಳು ಅನೇಕವಿದ್ದವು. ಮತದಾರ ಪದ್ಧತಿಯು ರೂಢಿಯಲ್ಲಿತ್ತು. ಲೋಕಸಭೆಗಳಿದ್ದವು. ರಾಜ್ಯಶಾಸನಯಂತ್ರದಲ್ಲಿ ಸುವ್ಯವಸ್ಥಿತವಾದ ಭಾಗಗಳಿದ್ದವು. ಮಂತ್ರಿಮಂಡಲವು ಅರಸನನ್ನು ಅಡ್ಡಹಾದಿಯಿಂದೆಳೆಯುವ ಕಡಿವಾಣವಾಗಿತ್ತು. ಅರಸನೂ ಒಬ್ಬ ಆಳೆಂದೂ ಪ್ರಜೆಗಳೇ ಮುಖ್ಯ ಅಧಿಕಾರಿಗಳೆಂದೂ ನಮ್ಮ ಜನರು ಭಾವಿಸಿದ್ದರು. ಸಾರಾಂಶ, ಈಗಿನ ಕಾಲದಲ್ಲಿ ನಮ್ಮ ಸಾಮಾನ್ಯ ಜನರಲ್ಲಿ ತಳವೂರಿದ ಕಲ್ಪನೆಗಳು ತೀರ ತಪ್ಪು ಕಲ್ಪನೆಗಳು. ಹಿಂದುಸ್ಥಾನದ ಜನರು ತಮ್ಮ ನೈಸರ್ಗಿಕ ಹಕ್ಕುಗಳನ್ನು ಕಾಪಾಡಿಕೊಳ್ಳುವುದರಲ್ಲಿ ಸದಾ ದಕ್ಷರಾಗಿದ್ದರು. ಅವರ ಸ್ವಾಭಾವಿಕ ಪ್ರವೃತ್ತಿಯು, ಅವರ ಮನಸ್ಸಿನ ಸಾಮಾನ್ಯ ಒಲವು ಏಕತಂತ್ರರಾಜ್ಯದ ಕಡೆಗಿರದೆ, ರಾಜ್ಯಯಂತ್ರವನ್ನು ನಿಯಮನಮಾಡುವುದರ ಕಡೆಗೇ ಹೆಚ್ಚಿಗೆ ಇರುತ್ತದೆ.

ಇವೆಲ್ಲ ಮಾತುಗಳನ್ನು ನಾವು ಕೇವಲ ಕಲ್ಪನೆಯಿಂದಾಗಲಿ, ದುರಾಗ್ರಹದ ಮೂಲಕವಾಗಿಯಾಗಲಿ ಹೇಳುವುದಿಲ್ಲ. ಪ್ರಾಚೀನ ಕಾಲದಿಂದ ಇಂದಿನವರೆಗಿನ ಇತಿಹಾಸದ ಆಧಾರದಿಂದ ಸಪ್ರಮಾಣ

ವಾಗಿ ತೋರಿಸುತ್ತೇವೆ. ಯಾವ ಯಾವ ಕಾಲದಲ್ಲಿ ಯಾವ ತರಹದ ರಾಜ್ಯಪದ್ಧತಿಗಳಿದ್ದವೆಂಬುದನ್ನು ಹೇಳಿ, ಪ್ರಜಾಸತ್ತಾತ್ಮಕ ರಾಜ್ಯಪದ್ಧತಿಯಲ್ಲಿ, ರಾಜ್ಯದ ಆಡಳಿತವು ಹೇಗೆ ಸಾಗಿಸಲ್ಪಡುತ್ತಿತ್ತು, ಅರಸನ ವಶದಲ್ಲಿ ರಾಜ್ಯವಿದ್ದಾಗ ಆತನ ನಿಯಂತ್ರಣಮಾಡುವುದಕ್ಕೆ ಯಾವ ಯಾವ ಉಪಾಯಗಳು ಕೈಕೊಳ್ಳಲ್ಪಟ್ಟಿದ್ದವೆಂಬುದನ್ನು ಹೇಳುತ್ತೇವೆ. ಮತ್ತು ಅರಸುತನವು ಪ್ರಬಲವಾಗುವುದಕ್ಕೆ ಯಾವ ಕಾರಣಗಳುಂಟಾದವೆಂಬುದನ್ನು ವಿವರಿಸಿ, ಒಟ್ಟಿನ ಮೇಲೆ ನಮ್ಮ ದೇಶದಲ್ಲಿ ಪುರಾತನ ಕಾಲದಿಂದಲೂ ಸಾಮಾನ್ಯತಃ ರೂಢವಾಗಿರುವ ರಾಜ್ಯಶಾಸನ ಪದ್ಧತಿಯ ವಿವಿಧ ಅಂಗಗಳನ್ನು ಸಂಕ್ಷೇಪವಾಗಿ ವರ್ಣಿಸುತ್ತೇವೆ. ಮಂತ್ರಿವರ್ಗದ ಘಟನೆಯು ಯಾವ ಪ್ರಕಾರದ್ದಿತ್ತು, ಕಾಯದೆಗಳನ್ನು ರಚಿಸುವ ಪದ್ಧತಿಯು ಯಾವದಿತ್ತು, ಮುಲಕಿ ರಾಜ್ಯವ್ಯವಸ್ಥೆಯ ಸ್ವರೂಪವೇನು, ನ್ಯಾಯದಾನವು ಯಾವ ರೀತಿಯಲ್ಲಿ ಕೊಡಲ್ಪಡುತ್ತಿತ್ತು, ಯುದ್ಧ ಅಥವಾ ಸೈನ್ಯದ ವ್ಯವಸ್ಥೆಯು ಹೇಗಿತ್ತು, ಕರಗಳನ್ನು ಕೂಡಿಸುವ ಪದ್ಧತಿಯು ಯಾವುದು, ಇವೇ ಮುಂತಾದ ರಾಜ್ಯಾಂಗಗಳನ್ನು ವಿವರಿಸುವೆವು.

---

## ೨ನೆಯ ಪ್ರಕರಣ

## ಸಾಧನ-ಸಾಮಗ್ರಿ



ಪ್ರಾಚೀನ ರಾಜ್ಯಪದ್ಧತಿಗಳನ್ನು ಕುರಿತಾಗಲಿ, ಮತ್ತಾವ ವಿಷಯವನ್ನು ಕುರಿತಾಗಲಿ ಗ್ರಂಥವನ್ನು ಬರೆಯುವಾಗ, ಎಲ್ಲಕ್ಕೂ ಮೊದಲಿಗೆ ಇದಿರು ನಿಲ್ಲುವ ದೊಡ್ಡ ತೊಂದರೆಯೆಂದರೆ ಸಾಮಗ್ರಿಯ ಅಭಾವ. ಹಿಂದುಸ್ಥಾನದ ಇತಿಹಾಸದ ಕಾಲವು ಅತಿ ವಿಸ್ತಾರವಾಗಿರುತ್ತದೆ. ಆ ಮಾನದಿಂದ ಸಾಮಗ್ರಿಯು ಅತ್ಯಲ್ಪವಾಗಿರುತ್ತದೆ. ನೂರಾರು ರಾಜ್ಯಕ್ರಾಂತಿಗಳು ಆಗಿ ಹೋಗಿವೆ, ಸಾವಿರಾರು ದಾಳಿ

ಗಳು ದೇಶದ ಮೇಲೆ ಬಿದ್ದಿವೆ. ಕಾಲನೂ ಅನೇಕ ಸಾಮುಗ್ರಿಗಳನ್ನು ನುಂಗಿ ಬಿಟ್ಟಿರುವನು. ಅನೇಕ ಸಾಮುಗ್ರಿಗಳು ಅಗ್ನಿಗೆ ಆಹುತಿಯಾಗಿರುವವು. ಹೀಗಿದ್ದರೂ ಕೂಡ ಹಿಂದಿನ ಕಾಲದಲ್ಲಿ ನಮ್ಮ ದೇಶದಲ್ಲಿ ಯಾವ ಕಾಲಕ್ಕೆ ಯಾವ ತರಹದ ರಾಜ್ಯಪದ್ಧತಿಗಳು ರೂಢವಾಗಿದ್ದವೆಂಬುದನ್ನು ಸ್ಥೂಲಮಾನದಿಂದ- ಆದರೂ ಸ್ಪಷ್ಟವಾಗಿ ತಿಳಿಯಲು ಸಾಕಾಗುವಷ್ಟು ಸಂಗತಿಗಳು ನಮಗೆ ಸಿಕ್ಕುತ್ತವೆ. ಈ ವಿಷಯವಾಗಿ ನಮಗೆ ಉಪಯೋಗವಾಗುವ ಸಾಮುಗ್ರಿಯು ಕೆಳಗೆ ಬರೆದ ಪ್ರಕಾರದ್ದಿರುತ್ತದೆ. ಆ ಸಾಮುಗ್ರಿಯ ಮೇಲಿಂದ, ರಾಜ್ಯಪದ್ಧತಿಗಳ ವಿಷಯವಾಗಿ ಸಾದ್ಯಂತವಾದ ಇತಿಹಾಸವನ್ನು ಬರೆಯುವುದು ಇಷ್ಟರಲ್ಲಿ ಶಕ್ಯವಿಲ್ಲದಿದ್ದರೂ, ಅದರ ಮೇಲಿಂದ ಆಗಿನ ಕಾಲದ ರಾಜ್ಯಪದ್ಧತಿಗಳ ಕಲ್ಪನೆಯು ನಮ್ಮ ಮನಸ್ಸಿನಲ್ಲಿ ಸ್ಪಷ್ಟವಾಗಿ ಮೂಡುವುದಕ್ಕೆ ಅದು ಸಾಕಾಗಿದೆ.

ಈ ಸಾಮುಗ್ರಿಯು ನಮಗೆ ವೈದಿಕ ಪೌರಾಣಿಕ ಪ್ರಾಕೃತ ವಾಙ್ಮಯದಲ್ಲಿಯೂ, ತಾಮ್ರಶಾಸನ ಶಿಲಾಶಾಸನಗಳಲ್ಲಿಯೂ ನಾಣ್ಯಗಳಲ್ಲಿಯೂ ದೊರೆಯುತ್ತದೆ. ಅಲ್ಲದೆ ರಾಜನೀತಿವಿಷಯಕ ಗ್ರಂಥಗಳೂ ನಮ್ಮ ಸುದೈವದಿಂದ ಕೆಲವು ಉಪಲಬ್ಧವಾಗಿವೆ. ಹಿಂದುಸ್ಥಾನದ-ಅಲ್ಲ-ಇಡೀ ಜಗತ್ತಿನ ಎಲ್ಲಕ್ಕೂ ಪುರಾತನ ಗ್ರಂಥಗಳೆಂದರೆ ವೇದಗಳು. ಈ ವೇದಗಳಲ್ಲಿ, ಅನೇಕ ಕಡೆಗೆ, ಆಗಿನ ಕಾಲದ ರಾಜ್ಯಪದ್ಧತಿಗಳ ಸಂಬಂಧದಿಂದ ಸ್ಪಷ್ಟವಾದ ಉದ್ಗಾರಗಳಿರುತ್ತವೆ. ಅಲ್ಲದೆ, ಒಟ್ಟಿನ ಮೇಲೆ ಆಗಿನ ಕಾಲದಲ್ಲಿ ನಮ್ಮಲ್ಲಿ ಯಾವ ತರಹದ ರಾಜ್ಯಪದ್ಧತಿಗಳಿದ್ದವೆಂಬುದನ್ನು ಊಹಿಸಲಿಕ್ಕೆ ಬರುವಂತಿದೆ; ಬ್ರಾಹ್ಮಣ, ಉಪನಿಷತ್ತುಗಳಲ್ಲಿ ಆ ತರಹದ ಉಲ್ಲೇಖಗಳು ದೊರೆಯುತ್ತವೆ. ಮಹಾಭಾರತದ ಶಾಂತಿಪರ್ವದ ೫೮ ಮತ್ತು ೫೯ನೆಯ ಅಧ್ಯಾಯಗಳು ಕೇವಲ ಈ ವಿಷಯವನ್ನೇ ಚರ್ಚಿಸುತ್ತವೆ. ಅಲ್ಲದೆ ಮಹಾಭಾರತ, ರಾಮಾಯಣ ಭಾಗವತಾದಿ ಗ್ರಂಥಗಳಿಂದ ಈ ವಿಷಯವಾಗಿ ಊಹಿಸಲೂ ಆಸ್ಪದವಿದೆ. ಆಶ್ವಲಾಯನ ಗೃಹ್ಯಸೂತ್ರ ಮುಂತಾದ ಗ್ರಂಥಗಳು ಈ ವಿಷಯದಲ್ಲಿ ನಮಗೆ ಸಹಾಯ

ವಾಗುತ್ತವೆ. ಬುದ್ಧ ಮತ್ತು ಜೈನರ ಜಾತಕಗಳೇ ಮುಂತಾದ ಪಾಲೀ ಭಾಷೆಯ ಗ್ರಂಥಗಳನ್ನೂ ನಾವು ಆಧಾರವಾಗಿ ತೆಗೆದುಕೊಳ್ಳಬಹುದು. ಇದು ಅಪ್ರತ್ಯಕ್ಷವಾದ ಸಾಮಗ್ರಿಯಾಯಿತು.

ಪ್ರತ್ಯಕ್ಷವಾದ ಸಾಮಗ್ರಿಯು ಎಂದರೆ, ಕೇವಲ ಈ ವಿಷಯ ವನ್ನೇ ಕುರಿತು ಬರೆದ ಅನೇಕ ಗ್ರಂಥಗಳೂ ನಮಗೆ ಸುದೈವ ದಿಂದ ಉಪಲಬ್ಧವಾಗಿವೆ. ಇವುಗಳಲ್ಲಿ ಮುಖ್ಯವಾದುವುಗಳು ಯಾವು ವೆಂದರೆ:- (೧) ಕೌಟಿಲೀಯ ಅರ್ಥಶಾಸ್ತ್ರ (ಕ್ರಿ. ಪೂ. ೩೦೦). ಇದು ಅತ್ಯಂತ ಮಹತ್ವದ ಗ್ರಂಥ. ಇದು ಹಿಂದಿನ ಅನೇಕ ರಾಜ್ಯತಂತ್ರ ಗಳ ಆಧಾರದಿಂದ ಬರೆಯಲ್ಪಟ್ಟಿದ್ದು, ಇದರಲ್ಲಿ ಹಿಂದಿನ ೧೮-೧೯ ಗ್ರಂಥಗಳ ಉಲ್ಲೇಖವಿದೆ. (೨) ಉಶನಸನೆಂಬವನು ಬರೆದ ದಂಡ ನೀತಿಯ ಪುಸ್ತಕವೊಂದಿರುತ್ತದೆ. (೩) ಬೃಹಸ್ಪತಿಯಿಂದ ಬರೆಯ ಲ್ಪಟ್ಟ ಅರ್ಥಶಾಸ್ತ್ರ. (೪) ಮಹಾಭಾರತದಲ್ಲಿ ಪ್ರಜಾಪತಿ ಎಂಬ ವನು ಬರೆದ ಒಂದು ದೊಡ್ಡ ದಂಡನೀತಿಯ ಉಲ್ಲೇಖವಿದೆ. ಆದರೆ ಆ ಗ್ರಂಥವು ಸಿಕ್ಕಿರುವುದಿಲ್ಲ. (೫) ಶುಕ್ರನಿಂದ ಬರೆಯಲ್ಪಟ್ಟ ನೀತಿ ಸಾರ (ಕ್ರಿ. ಪೂ. ೪ ಅಥವಾ ೫ನೆಯ ಶತಮಾನ) (೬) ಕಾಮಂದಕ ನಿಂದ ಬರೆಯಲ್ಪಟ್ಟ ನೀತಿಸಾರ. (೭) ಪಂಚತಂತ್ರವೂ ರಾಜಪುತ್ರ ರಿಗೆ ರಾಜಕಾರಣವನ್ನು ಕಥೆಗಳ ರೂಪದಿಂದ ಕಲಿಸುವ ಗ್ರಂಥ. ಅಲ್ಲಿ ಇದಕ್ಕೆ ನಯಶಾಸ್ತ್ರವೆಂದು ಹೆಸರು. (೮) ಮುಸಲ್ಮಾನರ ಆಳಿಕೆಯಲ್ಲಿ ಚಂಡೇಶ್ವರ, ಮಿತ್ರಮಿಶ್ರ, ನೀಲಕಂಠ ಮುಂತಾದ ಧರ್ಮಶಾಸ್ತ್ರಕಾರರು ಬರೆದ ಪುಸ್ತಕಗಳಿವೆ. ಅವು ಯಾವುವೆಂದರೆ, ರಾಜನೀತಿರತ್ನಾಕರ. ವೀರಮಿತ್ರೋದಯ, ರಾಜನೀತಿಮಯೂಖ ಇವೇ ಮುಂತಾದವುಗಳು. (೯) ಇವಲ್ಲದೆ, ಪ್ರತಿಯೊಂದು ಧರ್ಮ ಶಾಸ್ತ್ರ ಅಥವಾ ಸ್ಮೃತಿಗ್ರಂಥದಲ್ಲಿ ರಾಜಧರ್ಮದ ವಿಷಯವಾಗಿ ಒಂದೆರಡು ಪ್ರಕರಣಗಳು ಇದ್ದೇ ಇರುತ್ತವೆ. (೧೦) ಆ ತರುವಾಯ ಬೃಹಸ್ಪತಿಸೂತ್ರವೆಂಬ ಗ್ರಂಥವಿದೆ. (೧೧) ೧೦ನೆಯ ಶತಮಾನ ದಲ್ಲಿ ಸೋಮದೇವನಿಂದ ವಿರಚಿತವಾದ ನೀತಿವಾಕ್ಯಾಮೃತವೆಂಬು

ದೊಂದು ಗ್ರಂಥವಿದೆ. (೧೨) ಪುರಾಣಗಳಲ್ಲಿಯೂ ಅನೇಕ ಕಡೆಗೆ ಇದರ ಚರ್ಚೆ ಬಂದಿದೆ.

ರಾಜ್ಯತಂತ್ರಶಾಸ್ತ್ರಕ್ಕೆ ಮೊದಲು ದಂಡನೀತಿಯೆಂಬ ಹೆಸರಿತ್ತು. ಅರ್ಥಶಾಸ್ತ್ರವೆಂದರೂ ಇದೇ. ಏಕೆಂದರೆ, ದೊರೆತ ಸಂಪತ್ತನ್ನು ಬೆಳಸುವ ಶಾಸ್ತ್ರವು ಅರ್ಥಶಾಸ್ತ್ರವು. ದಂಡನೀತಿಗೆ ರಾಜಶಾಸ್ತ್ರ ಅಥವಾ ರಾಜಧರ್ಮವೆಂದೂ ಹೆಸರುಂಟು. ಮುಂದೆ, ದಂಡ ಮತ್ತು ಅರ್ಥ ಇವೆರಡೂ ಹಳೆಯ ಹೆಸರುಗಳು ಹೋಗಿ 'ನಯಶಾಸ್ತ್ರ' ಮತ್ತು 'ನೀತಿಶಾಸ್ತ್ರ' ಎಂಬ ಹೆಸರುಗಳು ಬಳಿಕೆಯಲ್ಲಿ ಬಂದುವು.

ನಮ್ಮ ಜನರು ರಾಜಕಾರಣವನ್ನು ಸ್ವತಂತ್ರವಾದ ಶಾಸ್ತ್ರವನ್ನಾಗಿ ಗಣಿಸದೆ, ಅದು ವಿಸ್ತಾರವಾದ ಸಮಾಜಶಾಸ್ತ್ರದ ಒಂದು ಅಂಗವೆಂದು ಮೊದಲು ಪರಿಗಣಿಸಿದ್ದರು. ಆದುದರಿಂದ, ಈ ವಿಷಯವಾಗಿ ಪ್ರತ್ಯೇಕವಾದ ಗ್ರಂಥಗಳು ಮುಂಚೆ ಬರೆಯಲ್ಪಡಲಿಲ್ಲ. ಸಮಾಜಪೋಷಣೆಗೆ ಬೇಕಾಗುವ ಸಲಕರಣೆಗಳೆಲ್ಲವನ್ನೂ ಅವರು ಧರ್ಮಶಾಸ್ತ್ರಗಳೆಂಬ ಗ್ರಂಥಗಳಲ್ಲಿಯೇ ಶೇಖರಿಸಿದ್ದಾರೆ. ಇರಲಿ. ಇದೀಗ ನಮಗೆ ಉಪಲಬ್ಧವಾಗಿರುವ ಭಾಂಡಾರದ ಸ್ವರೂಪವು.

ಈ ಭಾಂಡಾರವನ್ನೊಡೆದು ನೋಡಿದರೆ, ನಾವು ಅನೇಕ ವಿಲಕ್ಷಣವಾದ ಹೊಸ ಸಂಗತಿಗಳನ್ನು ಕಾಣಬಹುದು. ಅವುಗಳ ಮೇಲಿಂದ, ಈ ವಿಷಯವಾಗಿ ನಾವು ವಿಶ್ವಸನೀಯವಾದ ಮತ್ತು ಅವಿಚ್ಛಿನ್ನವಾದ ಇತಿಹಾಸವನ್ನು ಬರೆಯಬಹುದು.

ಮೇಲೆ ಹೇಳಿದಂತೆ, ಈ ಸಾಮುಗ್ರಿಯಲ್ಲಿ ಕೆಲವು ಅಪ್ರತ್ಯಕ್ಷ ರಾಜನೀತಿಶಾಸ್ತ್ರದ ಗ್ರಂಥಗಳಿರುತ್ತವೆ. ಕೆಲವು ಅರ್ಥಶಾಸ್ತ್ರವನ್ನು ಕುರಿತು ಬರೆದ ಗ್ರಂಥಗಳಿರುತ್ತವೆ. ಅರ್ಥಶಾಸ್ತ್ರಕ್ಕೆ ಹಿಂದಿನ ಕಾಲದಲ್ಲಿ 'ವಾರ್ತಾ' ಎಂದೆನ್ನುತ್ತಿದ್ದರು. ಒಕ್ಕಲತನ- ಪಶುಪಾಲ್ಯ-ವಾಣಿಜ್ಯ ಈ ವಿಷಯಗಳು ಅರ್ಥಶಾಸ್ತ್ರದಲ್ಲಿ ಸೇರಿರುತ್ತವೆ. ಅರ್ಥಶಾಸ್ತ್ರಕ್ಕೂ ರಾಜನೀತಿಶಾಸ್ತ್ರಕ್ಕೂ ನಿಕಟವಾದ ಸಂಬಂಧವಿರುವುದ

ರಿಂದ, ಕೌಟಿಲ ಮತ್ತು ಶುಕ್ರ ಇವರು ತಮ್ಮ ಗ್ರಂಥಗಳಲ್ಲಿ ಇವೆ ರಡೂ ಶಾಸ್ತ್ರಗಳನ್ನು ಕೂಡಿಯೇ ವಿವೇಚಿಸಿರುವರು.

ಈ ಹಳೆಯ ಸಾಮುಗ್ರಿಯ ಉಪಯೋಗವನ್ನು ಮಾಡಿಕೊಂಡು ಅನೇಕ ಪೌರ್ವಾತ್ಯ ಮತ್ತು ಪಾಶ್ಚಿಮಾತ್ಯ ಪಂಡಿತರು ಇಂಗ್ಲಿಷದ ಲ್ಲಿಯೂ ಇತರ ಭಾಷೆಗಳಲ್ಲಿಯೂ ಗ್ರಂಥಗಳನ್ನು ಬರೆದಿರುವರು. (ಅವುಗಳ ಪಟ್ಟಿಯನ್ನು ಕೊನೆಗೆ ನೋಡಬಹುದು). ಇವೆಲ್ಲವುಗಳ ಆಧಾರದಿಂದ, ನಾವು ಈ ಪುಸ್ತಕದಲ್ಲಿ ಹಿಂದುಸ್ಥಾನದ ಬೇರೆ ಬೇರೆ ಕಾಲಗಳಲ್ಲಿ ಯಾವ ಯಾವ ರಾಜ್ಯಪದ್ಧತಿಗಳಿದ್ದವು, ಅವುಗಳ ಸ್ವರೂ ಪವೇನು ಇವೇ ಮುಂತಾದ ಸಂಗತಿಗಳನ್ನು ಕುರಿತು ಸಂಕ್ಷೇಪವಾಗಿ ವಿವೇಚಿಸುತ್ತೇವೆ.

---

## ೩ನೆಯ ಪ್ರಕರಣ

## ಕಾಲವಿಭಾಗಗಳು



ನಾವು ರಾಜ್ಯಪದ್ಧತಿಗಳ ಬಗ್ಗೆ ವಿಸ್ತಾರವಾಗಿ ಹೇಳತೊಡಗುವ ಮುಂಚೆ, ಸ್ಥೂಲಮಾನದಿಂದ ನಮ್ಮ ಇತಿಹಾಸದಲ್ಲಿ ಕಾಲವಿಭಾಗ ಗಳನ್ನು ಮಾಡುವುದು ಅವಶ್ಯವಿದೆ. ಏಕೆಂದರೆ, ಬಹುಶಃ ನಮ್ಮ ದೇಶದ ಯಾವ ವಿಷಯವನ್ನು ಕುರಿತೇ ಇತಿಹಾಸವನ್ನು ಬರೆಯಲಿ, ಅದನ್ನು ನಾವು ವೇದಕಾಲದಿಂದಲೇ ಪ್ರಾರಂಭಿಸಬೇಕಾಗುತ್ತದೆ. ವೇದ ಕಾಲವಾದರೋ ಗಣನೆಗೆ ನಿಲುಕದಿದ್ದ ಕಾಲವು. ಆದರೆ, ವೇದಗಳಲ್ಲಿ ಆಗಿನ ಕಾಲದ ರಾಜ್ಯವ್ಯವಸ್ಥೆ ಹೇಗಿತ್ತೆಂಬ ಬಗ್ಗೆ ಸ್ಪಷ್ಟವಾದ ಉಲ್ಲೇ ಖಗಳು ದೊರೆಯುತ್ತವೆ. ಅರ್ಥಾತ್, ವೇದಗಳು ರಾಜ್ಯತಂತ್ರವನ್ನು ಮುಖ್ಯವಾಗಿ ತಿಳಿಸುವ ಪುಸ್ತಕಗಳಲ್ಲವಾದುದರಿಂದ, ಅವುಗಳಲ್ಲಿ ಬಂದಿ ರುವ ಉಲ್ಲೇಖಗಳು ವಿಸ್ತಾರವಾಗಿಲ್ಲ. ಅಲ್ಲಲ್ಲಿ ದೊರೆಯುವ ಉದ್ಧಾ

ರಗಳ ಮೇಲಿಂದ, ನಾವು ಆಗಿನ ಕಾಲದ ಸ್ಥಿತಿಯನ್ನು ಕುರಿತು ಊಹಿಸಬೇಕಾಗುತ್ತದೆ. ಗಣನೆಗೆ ನಿಲುಕದ ಆ ವೇದಕಾಲದಿಂದ ಪ್ರಾರಂಭ ಮಾಡಿಕೊಂಡು ನಮ್ಮ ಹಿಂದುಸ್ಥಾನವು ಪರಕೀಯರ ದಾಸ್ಯಕ್ಕೆ ಅಂದರೆ ಮುಸಲ್ಮಾನರ ಆಡಳಿತಕ್ಕೆ ಒಳಪಡುವವರೆಗೆ ನಮ್ಮ ದೇಶಕ್ಕ ಸ್ವತಂತ್ರವಾದ ರಾಜ್ಯತಂತ್ರವಿತ್ತು. ಈ ದೊಡ್ಡ ಅವಧಿಯಲ್ಲಿ ನಮ್ಮ ಜನರು ರಾಜ್ಯತಂತ್ರದಲ್ಲಿ ಅನೇಕ ತರಹದ ಪ್ರಯೋಗಗಳನ್ನು ಮಾಡಿ ನೋಡಿರುವರು. ಒಂದೇ ಕಾಲಕ್ಕೆ, ಅನೇಕ ಕಡೆಗೆ ಅನೇಕ ತರಹದ ರಾಜ್ಯಪದ್ಧತಿಗಳು ಪ್ರಚಲಿತವಾಗಿದ್ದುದೂ ಕಂಡು ಬರುತ್ತದೆ. ಆದರೂ, ನಾವು ಈ ದೀರ್ಘಕಾಲದಲ್ಲಿ ಸ್ಥೂಲಮಾನದಿಂದ ಮೂರು ಸಾಮಾನ್ಯ ಯುಗಗಳನ್ನು ಕಲ್ಪಿಸಬಹುದು. ಮೇಲ್ಕಾಣಿಸಿದ ಅವಧಿಯು ಎಂದರೆ ವೇದಕಾಲದಿಂದ ಪ್ರಾರಂಭಮಾಡಿಕೊಂಡು ಮುಸಲ್ಮಾನರ ಪ್ರವೇಶದವರೆಗಿನ ಅವಧಿಯು ಸುಮಾರು ಕನಿಷ್ಠ ೫-೬ ಸಾವಿರ ವರ್ಷದ್ದಾಗುತ್ತದೆ. ಈ ಅವಧಿಯಲ್ಲಿ ನಾವು ಸ್ಥೂಲವಾಗಿ ಮೂರು ಯುಗಗಳನ್ನು ಕಲ್ಪಿಸಬಹುದು. (೧) ಅತ್ಯಂತ ಪುರಾತನ ಕಾಲದಿಂದ ಕ್ರಿ. ಪೂ. ೧೨೦೦ ವರ್ಷಗಳ ವರೆಗಿನ ಕಾಲಕ್ಕೆ ವೈದಿಕ ಕಾಲವೆಂದು ಕರೆಯಬಹುದು. (೨) ಮುಂದೆ ಕ್ರಿ. ಪೂ. ೧೨೦೦ ವರ್ಷಗಳಿಂದ ಕ್ರಿ. ಶಕದ ನಂತರದ ೫೦೦ ವರ್ಷಗಳ ವರೆಗಿನ ಕಾಲವು. ಇದಕ್ಕೆ ಬುದ್ಧ-ಜೈನ ಕಾಲವೆಂದೂ ಹೇಳಬಹುದು. (೩) ತದನಂತರದ ಕಾಲಕ್ಕೆ ಅರ್ವಾಚೀನ ಕಾಲವೆಂದು ಹೇಳಬಹುದು. ಹೀಗೆ, ನಾವು ಮೂರು ಯುಗಗಳನ್ನು ಕಲ್ಪಿಸಲಿಕ್ಕೆ ಕಾರಣವೇನೆಂದರೆ, ಒಂದೊಂದು ಕಾಲದಲ್ಲಿ ಒಂದೊಂದು ತರಹದ ರಾಜ್ಯಪದ್ಧತಿಗಳು ನಮ್ಮಲ್ಲಿ ವಿಶೇಷವಾಗಿ ಪ್ರಚಾರದಲ್ಲಿದ್ದುವು. ಪ್ರತಿಯೊಂದು ಕಾಲದ ಮುಖ್ಯ ಲಕ್ಷಣಗಳನ್ನು ನಾವು ವಾಚಕರ ಅವಗಾಹನೆಗಾಗಿ ಸಂಕ್ಷೇಪವಾಗಿ ಕೊಡುತ್ತೇವೆ.

## ೧ ವೈದಿಕಕಾಲ.

ಈ ಕಾಲದ ಲಕ್ಷಣಗಳನ್ನು ಸ್ಪಷ್ಟವಾಗಿ ಹೇಳುವುದು ಬಹಳ ಕಠಿಣ ಕೆಲಸವು. ವೇದಗಳ ಅರ್ಥವನ್ನು ಮಾಡುವುದರಲ್ಲಿ ಅನೇ

ಕರಲ್ಲಿ ಭಿನ್ನಾಭಿಪ್ರಾಯಗಳಿರುವವು. ಅಲ್ಲದೆ, ಒಟ್ಟಿನ ಮೇಲೆ ನಮ್ಮ ಜನರ ಮನೋಭೂಮಿಕೆಯಲ್ಲಿ ಯಾವ ರಾಜ್ಯಪದ್ಧತಿಗೆ ಪ್ರಾಧಾನ್ಯವಿತ್ತೆಂದು ಹೇಳುವುದು ಸುಲಭವಲ್ಲ. ಈ ಕಾಲದಲ್ಲಿ ಅರಸುತನದ (Monarchy) ಪ್ರಾಬಲ್ಯವಿತ್ತೆಂದು ಪ್ರೊ. ಜಯಸ್ವಾಲ ಇವರ ಅಭಿಪ್ರಾಯ. ತದ್ವಿರುದ್ಧವಾಗಿ, ಈ ಕಾಲದಲ್ಲಿ ಪ್ರಜಾಸತ್ತಾತ್ಮಕ ರಾಜ್ಯಪದ್ಧತಿಯೇ ಹೆಚ್ಚಿಗೆ ಪ್ರಬಲವಾಗಿತ್ತೆಂದು ಡಾ. ಶ್ಯಾಮಶಾಸ್ತ್ರಿಗಳು ಅಭಿಪ್ರಾಯಪಡುತ್ತಾರೆ. ಆದರೆ, ಒಂದು ಮಾತು ಮಾತ್ರ ನಿಜ. ಪ್ರಜಾಸತ್ತಾತ್ಮಕ ರಾಜ್ಯಪದ್ಧತಿಗಳು ಇದ್ದೇ ಇಲ್ಲವೆಂದು ಶ್ರೀ. ಜಯಸ್ವಾಲ ಇವರೂ ಹೇಳುವುದಿಲ್ಲ. ಹಾಗೆಯೇ ಅರಸುತನದ ರಾಜ್ಯಪದ್ಧತಿಗಳು ತೀರ ಇದ್ದಿಲ್ಲವೆಂದು ಡಾ. ಶ್ಯಾಮಶಾಸ್ತ್ರಿಗಳೂ ಹೇಳಲಾರರು. ಒಟ್ಟಿಗೆ ನಮಗೆ ತೋರುವುದೇನಂದರೆ ಈ ಕಾಲದಲ್ಲಿ ಎರಡೂ ತರಹದ ರಾಜ್ಯಪದ್ಧತಿಗಳಿದ್ದರೂ, ಜನರ ಮನಸ್ಸಿನಲ್ಲಿ ಪ್ರಜಾಸತ್ತಾತ್ಮಕ ರಾಜ್ಯಪದ್ಧತಿಯೇ ಪ್ರಾಧಾನ್ಯವಾಗಿತ್ತು. ನಮ್ಮ ಋಷಿಗಳು ಲೋಕಸತ್ತಾತ್ಮಕ ರಾಜ್ಯಪ್ರಿಯರು. ಆವರು ಹಿಂದುಸ್ಥಾನದಲ್ಲಿ ಬಂದು ತಳವೂರಿದಾಗಂತೂ ಅವರಿಗೆ ಅರಸನೆಂಬುದೇ ಗೊತ್ತಿರಲಿಲ್ಲ. ಈ ದೇಶಕ್ಕೆ ಬಂದನಂತರ ಅವರು ಮುಂಚೆ ಮುಂಚೆ ಆರಸನನ್ನು ಆರಿಸಿಕೊಂಡು ಕೆಲಸ ಸಾಗಿಸಿದರು. ಮುಂದೆ ಈ ಅರಸನೇ ವಂಶಪರಂಪರ ಅರಸನಾದನು. ಸಾರಾಂಶ, ವೈದಿಕ ಕಾಲದಲ್ಲಿ ಮುಂಚೆ ಮುಂಚೆಯಂತೂ, ನಮ್ಮ ದೇಶದ ಜನರಿಗೆ ಅರಸನೆಂಬುದೇ ಗೊತ್ತಿರಲಿಲ್ಲ. ವೈದಿಕ ಕಾಲದ ಕೊನೆಗೆ ಮಾತ್ರ ಆರಸುತನವು ನಮ್ಮಲ್ಲಿ ನೆಲೆಗೊಂಡಿತು. 'ನಾವಿಷ್ಣುಃ ಪೃಥ್ವೀಪತಿಃ' ಎಂಬ ತತ್ವವು ಈಗ ನಮ್ಮಲ್ಲಿಯ ಹಳೆಯ ಜನರಲ್ಲಿ ಬೇರೂರಿಕೊಂಡಿದೆ. ಆ ಕಲ್ಪನೆಯು ಇತ್ತೀಚಿನದು, ಎಂದು ಕೇಳಿ ಅವರಿಗೆ ಆಶ್ಚರ್ಯವಾಗದಿರದು. ಆದರೆ, ನಿಜಸ್ಥಿತಿಯು ಹಾಗೆಯೇ ಇರುತ್ತದೆಂಬುದು ಮುಂದಿನ ವಿವೇಚನೆಯಿಂದ ಗೊತ್ತಾಗುವುದು. ಈ ಕಾಲದಲ್ಲಿ ಪ್ರಜೆಗಳಿಗೆ ವಿಶೇಷ ಹಕ್ಕುಗಳಿದ್ದವೆಂಬುದನ್ನು ಯಾರೂ ಅಲ್ಲಗಳೆಯುವಂತಿಲ್ಲ.

## ೨ ಬೌದ್ಧ ಮತ್ತು ಜೈನಕಾಲ.

ವೈದಿಕ ಕಾಲವು ನಷ್ಟವಾಗಿ ಬುದ್ಧ ಮತ್ತು ಜೈನ ಮತಗಳು ಸ್ಥಾಪಿತವಾದ ಬಳಿಕಂತೂ, ಅರಸೊತ್ತಿಗೆಯು ತೀರ ಕ್ಷೀಣವಾಯಿತು. ಜೈನರೂ ಬೌದ್ಧರೂ ಸಮತಾವಾದಿಗಳು. ಎಲ್ಲ ಪುರುಷರೂ ಸಮಾನರು, ಜನರಲ್ಲಿ ಉಚ್ಚನೀಚ ಭೇದವಿಲ್ಲ, ದೇವರೆಂಬ ಉಚ್ಚ ವ್ಯಕ್ತಿಯು ಕೂಡ ಇಲ್ಲ- ಎಂದ ಬಳಿಕ ಅರಸನೆಂಬ ಉಚ್ಚ ವ್ಯಕ್ತಿಗೆ ಶ್ರೇಷ್ಠತ್ವ ವೆಲ್ಲಿಂದ ಬರಬೇಕು? ಆದಕಾರಣ ಈ ಕಾಲದಲ್ಲಿ ಪ್ರಜೆಗಳಿಗೆ ರಾಜಕೀಯ ಹಕ್ಕುಗಳು ವಿಶೇಷವಾಗಿದ್ದವೆಂದು ಹೇಳುವ ಆವಶ್ಯಕತೆಯಿಲ್ಲ. ಜೈನರು ಅಸ್ಪೃಶ್ಯತೆಯನ್ನು ತೀಕ್ಷ್ಣವಾಗಿ ಹೀಯಾಳಿಸುವರು, ಮತ್ತು ಈ ಜಗತ್ತಿನಲ್ಲಿ ಅದು ಶಕ್ಯವೇ ಇಲ್ಲವೆಂದು ಪ್ರತಿಪಾದಿಸುವರು. ಅಸ್ಪೃಶ್ಯರ ಕೈಯೊಳಗಿನ ಹೂಹಣ್ಣುಗಳ ವಾಸನೆಯನ್ನು ಗಾಳಿಯು ನಾಲ್ಕು ದಿಕ್ಕುಗಳಲ್ಲಿಯೂ ಪಸರಿಸುವುದಿಲ್ಲವೆ? ಮತ್ತು, ಆ ಗಾಳಿಯು ಬ್ರಾಹ್ಮಣನ ಹೊಟ್ಟೆಯಲ್ಲಿ ಹೋಗುವುದಿಲ್ಲವೆ?- ಎಂದು ಇವರು ಆಕ್ಷೇಪಿಸುವರು (ನಂದಿಸೂತ್ರ). ಸಾರಾಂಶ, ಈ ಧರ್ಮಗಳು ಸಮಾನತ್ವವನ್ನು ಉಪದೇಶಿಸುವುದರಿಂದ, ಈ ಕಾಲದಲ್ಲಿ ಪ್ರಜಾಸತ್ತಾತ್ಮಕ ರಾಜ್ಯಗಳು ಸಂಪೂರ್ಣವಾಗಿ ನೆಲೆಗೊಂಡವು. ಗಣ, ಕುಲ ಮತ್ತು ಸಂಘಗಳು ರಾಜ್ಯವ್ಯವಸ್ಥೆಯನ್ನು ನೋಡುತ್ತಿದ್ದವು. ವೇದದ ಪ್ರಮಾಣವನ್ನಾಗಲಿ, ಅಥವಾ ಮನುಷ್ಯರಿಗಿಂತಲೂ ಹೆಚ್ಚಿನವನು ಯಾವನೋ ಒಬ್ಬ ದೇವರು ಇರುತ್ತಾನೆಂಬ ಕಲ್ಪನೆಯನ್ನಾಗಲಿ ಇವರು ನಿರಾಕರಿಸಿದ ಮೂಲಕ, ಇವರ ಕಾಲದಲ್ಲಿ, ಅರಸೊತ್ತಿಗೆಗಾಗಲಿ ಅಥವಾ ಯಾವುದೊಂದು ಪ್ರಮಾಣಕ್ಕಾಗಲಿ ಆಸ್ಪದವೇ ಇರಲಿಲ್ಲ. ಈ ಧರ್ಮಗಳಿಂದ ನಮ್ಮ ನೈತಿಕ ಅಥವಾ ಧಾರ್ಮಿಕ ಜೀವನದ ಮೇಲೆ ಉಂಟಾದ ಪರಿಣಾಮಗಳನ್ನು ನಾವು ಇಲ್ಲಿ ಹೇಳುವ ಕಾರಣವಿಲ್ಲ. ಕೇವಲ ರಾಜ್ಯಪದ್ಧತಿಯ ಮೇಲೆ ಆದ ಪರಿಣಾಮವನ್ನು ಹೇಳುತ್ತೇವೆ. ಆ ಮುಖ್ಯ ಪರಿಣಾಮವೆಂದರೆ ವೈದಿಕ ಕಾಲದ ಕೊನೆಯ ಭಾಗದಲ್ಲಿ ಉತ್ಪನ್ನವಾದ ಅರಸೊತ್ತಿಗೆಗಳು ಪೂರ್ಣವಾಗಿ ನಷ್ಟವಾ

ದವು. ಅವುಗಳ ಸ್ಥಳಗಳನ್ನು ಪ್ರಜಾಸತ್ತಾತ್ಮಕ ಸಂಸ್ಥೆಗಳು ಎಲ್ಲೆಲ್ಲಿಯೂ ಆಕ್ರಮಿಸಿಕೊಂಡವು.

## ೩ ಅರ್ವಾಚೀನ ಕಾಲ.

ಸಿಕಂದರ ಬಾದಶಹನು ಹಿಂದುಸ್ಥಾನದಲ್ಲಿ ಪ್ರವೇಶಿಸಿದಾಗ ಅಂದರೆ ಕ್ರಿ. ಶ. ಪೂ. ೪ನೆಯ ಶತಮಾನದಲ್ಲಿ, ದೇಶದಲ್ಲಿ ಚಿಕ್ಕ ಚಿಕ್ಕ ಪ್ರಜಾಸತ್ತಾತ್ಮಕ ರಾಜ್ಯಪದ್ಧತಿಗಳು ಹಬ್ಬಿಕೊಂಡಿದ್ದವು. ಆದರೆ, ಸಿಕಂದರಬಾದಶಹನ ಪೆಟ್ಟು ಈ ಚಿಕ್ಕ ರಾಜ್ಯಗಳಿಗೆ ಬಡೆದೊಡನೆ ಅವು ಹತವೀರ್ಯವಾದವು. ಆಗ, ಆ ಪ್ರಜಾಸತ್ತಾತ್ಮಕ ರಾಜ್ಯಪದ್ಧತಿಯೊಳಗಿನ ಕೆಲವು ದೋಷಗಳು ಸ್ಫುಟವಾಗಿ ವ್ಯಕ್ತವಾದವು. ಅವೆಲ್ಲವೂ ಒಟ್ಟುಗೂಡಿ, ಯಾವನೊಬ್ಬ ಸಮ್ರಾಟನ ಕೈಕೆಳಗೆ ಕೆಲಸ ಮಾಡುವುದು ಅವಶ್ಯವೆಂದು ಆಗ ತೋರಿತು. ಪರಶತ್ರುವನ್ನು ಇದಿರಿಸುವದಕ್ಕೆ ಪ್ರಜಾಸತ್ತಾತ್ಮಕ ರಾಜ್ಯಪದ್ಧತಿಗಳು ಅಷ್ಟೊಂದು ಸಮರ್ಥವಾಗುವುದಿಲ್ಲ. ಈ ಮಾತು, ಮೊನ್ನಿನ ಭಯಂಕರವಾದ ಯುರೋಪೀಯ ಯುದ್ಧದಲ್ಲಿಯೂ ಜನರ ನಿದರ್ಶನಕ್ಕೆ ಬಂದಿರುತ್ತದೆ. ಇರಲಿ. ಆಗಿನಿಂದ ಮೆಲ್ಲಮೆಲ್ಲನೆ, ಬರಬರುತ್ತ ಪ್ರಜಾಸತ್ತಾತ್ಮಕ ರಾಜ್ಯಪದ್ಧತಿಗಳು ಮೂಲೆಗುಂಪಾದವು. ಅಲ್ಲದೆ, ಆ ಕಾಲವು ಬುದ್ಧ ಮತ್ತು ಜೈನ ಮತಗಳನ್ನೂ ನುಂಗಿತು. ಸಾರಾಂಶ, ಈ ಅರ್ವಾಚೀನ ಕಾಲದಲ್ಲಿ, ಅರಸುತನದ ರಾಜ್ಯಪದ್ಧತಿಗಳು ಪ್ರಬಲವಾದವು. ಮತ್ತು ಅರಸನು ದೇವಾಂಶಸಂಭೂತನೆಂಬ ಕಲ್ಪನೆಯು ಈ ಕಾಲದಲ್ಲಿಯೇ ಹೆಚ್ಚಿಗೆ ಬೆಳೆಯಿತು. ಆದರೆ, ನಾವು ಇಲ್ಲಿ ಒಂದು ಮಾತನ್ನು ಮಾತ್ರ ನೆನಪಿನಲ್ಲಿಡತಕ್ಕದ್ದು. ಅದೇನೆಂದರೆ, ಎಂಥ ಪ್ರಬಲವಾದ ಅರಸುತನದ ಕಾಲವಿದ್ದರೂ, ನಮ್ಮ ದೇಶದಲ್ಲಿ ಅರಸನಿಗೆ ಅನಿಯಂತ್ರಿತ ಅಧಿಕಾರವು ಎಂದಿಗೂ ಇದ್ದಿಲ್ಲ. ಪಾಶ್ಚಿಮಾತ್ಯರಲ್ಲಿರುವ ದೇವಾಂಶಸಂಭೂತತ್ವದ ಕಲ್ಪನೆಗೂ ನಮ್ಮ ಕಲ್ಪನೆಗೂ ಬಹಳ ಭೇದವಿದೆ. ಆವೆರಡನ್ನೂ ಒಂದುಗೂಡಿಸಬಾರದು. ಮುಖ್ಯಭೇದವೆಂದರೆ - ನಮ್ಮಲ್ಲಿ ಅರಸುತನದ **ಅಧಿಕಾರ**ದ ಕಲ್ಪನೆಗಿಂತಲೂ **ರಾಜಧರ್ಮ**ದ ಕಲ್ಪನೆಗೆ ಹೆಚ್ಚಿಗೆ ಪ್ರಾಧಾನ್ಯತೆ ಇತ್ತು. ಅರಸನ

ಅಧಿಕಾರವರ್ಣನೆಗಿಂತಲೂ ಆತನ ಕರ್ತವ್ಯದ ವರ್ಣನೆಗಳೇ ಹೆಚ್ಚಿಗೆ ಇರುತ್ತವೆ. ಅಲ್ಲದೆ, ಅರಸನಿಗೆ ಅನೇಕ ಮುಗದಾಣಗಳಿದ್ದವು. ಈಗಿನ ಅನಿಯಂತ್ರಿತ ಅರಸನ ಕಲ್ಪನೆಯು ನಮ್ಮಲ್ಲಿ ಎಂದಿಗೂ ಇದ್ದಿಲ್ಲ. ಈ ಕಲ್ಪನೆಯು ಇತ್ತೀಚಿಗೆ, ಸ್ವಾರ್ಥಸಾಧುಗಳಿಂದ ಹಾಕಿದ ಕಲ್ಪನೆಯು. ಅರಸನು ದೇವಾಂಶಸಂಭೂತನೆಂಬ ಕಲ್ಪನೆಯನ್ನು ಹೇಳುವಾಗಲೆ ಆತನ ಮೇಲಿನ ಜವಾಬದಾರಿಯನ್ನು ಅಷ್ಟೇ ಜೋರಿನಿಂದ ಹೇಳಿರುತ್ತಾರೆಂಬುದನ್ನು ನಾವು ಮರೆಯುತ್ತೇವೆ. ಇರಲಿ.

ಈ ಅರ್ವಾಚೀನ ಕಾಲದ ಇತಿಹಾಸವನ್ನು ನಾವು ಈ ನಮ್ಮ ಪುಸ್ತಕದಲ್ಲಿ ವಿಸ್ತಾರವಾಗಿ ಹೇಳಿರುವುದಿಲ್ಲ. ಪ್ರಾಚೀನ ಕಾಲದ ರಾಜ್ಯಪದ್ಧತಿಗಳನ್ನು ಕುರಿತು ಸಂಶೋಧನವಾದಂತೆ, ಈ ಅರ್ವಾಚೀನ ಇತಿಹಾಸದ ಸಂಶೋಧನವು ಇನ್ನೂ ಆಗಿಲ್ಲ.

---

## ೪ನೆಯ ಪ್ರಕರಣ.

# ರಾಜ್ಯಸಂಸ್ಥೆಯ ಉದಯ ಮತ್ತು ಉದ್ದೇಶ.

ಸಮಾಜದಲ್ಲಿ, ರಾಜ್ಯಸಂಸ್ಥೆ ಅಥವಾ ಸರಕಾರವನ್ನು ಸ್ಥಾಪಿಸುವುದಕ್ಕೆ ಯಾವ ಕಾರಣಗಳುಂಟಾದವೆಂಬುದನ್ನೂ ರಾಜ್ಯಸಂಸ್ಥೆಯ ಧ್ಯೇಯ ಮತ್ತು ಉದ್ದೇಶಗಳಾವುವೆಂಬುದನ್ನೂ ನಾವು ಈ ಪ್ರಕರಣದಲ್ಲಿ ಹೇಳುತ್ತೇವೆ.

ರಾಜ್ಯಸಂಸ್ಥೆಯ ವಿಕಾಸದಲ್ಲಿ ಮೂರು ಭಾಗಗಳನ್ನು ಮಾಡಬಹುದು. (೧) ಮುಂಚೆ ಜನರು ಗುಂಪುಕಟ್ಟಿಕೊಂಡು ಇರಹತ್ತಿದಾಗ, ಪ್ರತಿಯೊಂದು ಕುಟುಂಬದಲ್ಲಿ ತಂದೆಗಿಂತಲೂ ತಾಯಿಗೆ ಪ್ರಾಧಾನ್ಯವಿತ್ತು. ಪಶುಪಕ್ಷಿಗಳಲ್ಲಿಯೂ ತಾಯಿಗೇ ಪ್ರಾಧಾನ್ಯ ಹೆಚ್ಚು, ತಂದೆಗೆ ಪ್ರಾಧಾನ್ಯವಿಲ್ಲ. ಹಾಗೆಯೇ ಸಮಾಜದ ಪ್ರಥಮಾ

ವಸ್ಥೆಯಲ್ಲಿ ತಂದೆಗಿಂತಲೂ ತಾಯಿಯು ಹೆಚ್ಚಿನವಳು. ಮಗನಿಗೆ ತಾಯಿಯ ಹೆಸರಿನ ಮೇಲಿಂದ ಕರೆಯುವ ಪದ್ಧತಿಯು ಇದೇ ಕಾರಣಕ್ಕೋಸ್ಕರವೇ ರೂಢವಾಗಿರಬಹುದು. ದಿತಿಯ ಮಕ್ಕಳು ದೈತ್ಯರು, ವಿನತೆಯ ಮಗನು ವೈನತೇಯ. ಅಂಜನೆಯ ಮಗ ಆಂಜನೇಯ. ಈ ತರಹದ ಕುಟುಂಬ ವ್ಯವಸ್ಥೆಗೆ ಮಾತೃಪ್ರಧಾನ ಕುಟುಂಬ ವ್ಯವಸ್ಥೆಯೆನ್ನಬಹುದು. ಇಂಥ ಸ್ಥಿತಿಯಲ್ಲಿ ಆಸ್ತಿಯ ಮತ್ತು ದೇಹದ ಸುರಕ್ಷಿತತೆಯು ವಿಶೇಷವಾಗಿರಲಿಲ್ಲ. ಅಲ್ಲದೆ ನೈತಿಕ ಬಂಧನಗಳೂ ಕಡಿಮೆ. ಪಾತಿವ್ರತ್ಯದ ಕಲ್ಪನೆಯು ತೀಕ್ಷ್ಣವಾಗಿದ್ದಿಲ್ಲ. ಆದರೆ ಇಂಥ ಸ್ಥಿತಿಯು ಬಹಳ ಕಾಲ ಬಾಳುವುದು ಶಕ್ಯವಿದ್ದಿಲ್ಲ. ಆದ ಕಾರಣ ಈ ಸ್ಥಿತಿಯು ಹೋಗಿ ಪಿತೃಪ್ರಧಾನ ಕುಟುಂಬ ವ್ಯವಸ್ಥೆಯು ರೂಢಿಯಲ್ಲಿ ಬಂದಿತು. ಏಕೆಂದರೆ, ಆಸ್ತಿಯ ಮತ್ತು ದೇಹದ ಸಂರಕ್ಷಣೆಯನ್ನು ಮಾಡುವುದಕ್ಕೆ ತಾಯಿಗಿಂತ ತಂದೆಯು ಹೆಚ್ಚು ಶಕ್ತಿವಂತನು. ಆದುದರಿಂದ ತಂದೆಗೆ ಪ್ರಾಬಲ್ಯವುಂಟಾಯಿತು. ಪ್ರತಿಯೊಂದು ಕುಟುಂಬವನ್ನು ಸಂರಕ್ಷಿಸುವ ಭಾರವು ಆತನ ಮೇಲೆ ಬಿತ್ತು. ಆದಕಾರಣ, ಕುಟುಂಬದೊಳಗಿನ ಜನರನ್ನು ನಿಯಮನ ಮಾಡುವ ಅಧಿಕಾರವೂ ಆತನಿಗೆ ಉಂಟಾಯಿತು. ತಂದೆಯೆಂದರೆ ಆ ಕುಟುಂಬದ ಅರಸನೆಂದೇ ಹೇಳಬಹುದು. ಆ ಕುಟುಂಬದ ಜನರ ಧಾರ್ಮಿಕ ನೈತಿಕ ಆಚರಣೆಯನ್ನು ಯೋಗ್ಯ ಮಾರ್ಗಕ್ಕೆ ಹಚ್ಚುವದು ಆತನ ಅಧಿಕಾರ. ಅವರಲ್ಲಿ ಯಾರಾದರೂ ಅಪರಾಧಮಾಡಿದರೆ ಅವರನ್ನು ದಂಡಿಸುವ ಅಧಿಕಾರವೂ ಆತನದೇ. ಆತನ ಮರಣದ ನಂತರ ಆತನ ಹಿರಿಯ ಮಗನು ಆ ಅಧಿಕಾರಿಗಳಿಗೆ ಪಾತ್ರನು. ಆಗ ಸಮಾಜಕ್ಕೆ ಅರಸನಿರಲಿಲ್ಲ, ಅಥವಾ ಪುರೋಹಿತ ವರ್ಗವಿರಲಿಲ್ಲ. ಪ್ರತಿಯೊಂದು ಕುಟುಂಬವು ಒಂದು ಚಿಕ್ಕ ಸ್ವತಂತ್ರರಾಜ್ಯವೆಂದೇ ಹೇಳಬಹುದು. ಇದು ಮೊದಲನೆಯದು.

ಆದರೆ, ಅನೇಕ ಕುಟುಂಬಗಳು ಒಂದೆಡೆಗೆ ವಾಸ ಮಾಡಲಾರಂಭಿಸಿದಾಗ ಅವೆಲ್ಲವುಗಳನ್ನೂ ಸಂರಕ್ಷಿಸುವವರು ಯಾರು? ಮತ್ತು ಆ ಕುಟುಂಬಗಳ ಜನರೊಳಗೆ ತಂಟೆಗಳು ಉದ್ಭವಿಸಿದಾಗ ಅವು

ಗಳನ್ನು ತೀರಿಸುವವರು ಯಾರು? ಅಲ್ಲದೆ, ಕುಟುಂಬದಲ್ಲಿ ಮಕ್ಕಳು ಮೊಮ್ಮಕ್ಕಳು ಹುಟ್ಟಿ ಕುಟುಂಬವು ಬೆಳೆಯಿತೆಂದರೆ ಆ ಗೋತ್ರದಲ್ಲಿಯ ಯಾವತ್ತು ಜನರನ್ನು ನಿಯಮನ ಮಾಡುವುದಕ್ಕೆ ಯಾವನೊಬ್ಬನು ಬೇಕಲ್ಲವೆ? ಈ ಕಾರಣಗಳ ಮೂಲಕ, ಮುಂಚಿನ ಚಿಕ್ಕ ಚಿಕ್ಕ ಗುಂಪುಗಳು ದೊಡ್ಡವಾಗಿ ಕುಲಗಳಾದವು. ಒಂದೊಂದು ಕುಲಕ್ಕೆ ಒಬ್ಬೊಬ್ಬ ಮುಖ್ಯಸ್ಥನು ನೇಮಿಸಲ್ಪಟ್ಟನು. ಕುಟುಂಬದಲ್ಲಿ ತಂದೆಗೆ ಯಾವ ಅಧಿಕಾರವೋ ಆ ಅಧಿಕಾರವು ಕುಲದಲ್ಲಿ ಕುಲಪತಿಗೆ ಇತ್ತು. ಸಾರಾಂಶ, ಈಗ ಕುಟುಂಬದ ಬದಲು ಕುಲವೆಂಬುದೊಂದು ಚಿಕ್ಕ ರಾಜ್ಯವಾಯಿತು. ಅದಕ್ಕೆ ಕುಲಪತಿಯೇ ಅರಸನು. ಮುಂದೆ ಅನೇಕ ಕುಲಗಳು ಕೂಡಿ ಜನ ಅಥವಾ ಗಣಗಳಾದವು. ಆ ಜನ ಅಥವಾ ಗಣಗಳಿಗೆ ಒಬ್ಬ ಮುಖ್ಯಸ್ಥನ ನೇಮಿಸಲ್ಪಡುತ್ತಿದ್ದನು. ಆ ಜನ ಅಥವಾ ಗಣವನ್ನು ಸಂರಕ್ಷಿಸವುದು ಆತನ ಕರ್ತವ್ಯ. ಆತನಿಗೆ ಪ್ರಜಾಪತಿಯೆಂದು ಹೆಸರು. ಪುರಾಣಗಳಲ್ಲಿ ನಾವು ಇಂಥ ಅನೇಕ ಪ್ರಜಾಪತಿಗಳ ಹೆಸರುಗಳನ್ನು ಕಾಣಬಹುದು. ಉದಾ:- ದಕ್ಷ, ಕಶ್ಯಪ, ಕರ್ದಮ, ಅರಣ್ಯ, ಧರ್ಮ, ವಶಿಷ್ಠ. ಈ ಪ್ರಜಾಪತಿಯ ರಾಜಕೀಯ ಅಧಿಕಾರವು ಬಲು ದೊಡ್ಡದು. ತನ್ನ ಗಣದೊಳಗಿನ ಜನರಿಗೆ ಮರಣ ದಂಡನೆಯನ್ನು ಕೊಡುವ ಅಧಿಕಾರವು ಕೂಡ ಆತನಿಗಿತ್ತು. ಅ ಗಣಕ್ಕೆ ಧಾರ್ಮಿಕ ಗುರುವು ಆತನೇ. ಆದರೆ, ಆತನು ಆ ವಿಷಯದಲ್ಲಿ ಪುರೋಹಿತ ವರ್ಗದ ಸಲಹೆಯಿಂದ ಕೆಲಸ ಮಾಡತಕ್ಕದ್ದು. ಆರ್ಯರು ಹಿಂದುಸ್ಥಾನಕ್ಕೆ ಬಂದು ನೆಲಸಿದಾಗ ಅವರಲ್ಲಿ ಪಿತೃಪ್ರಧಾನಕುಟುಂಬ ವ್ಯವಸ್ಥೆಯಿತ್ತು. ಅಥರ್ವವೇದ ೩-೩೦ ರಲ್ಲಿ ಇದರ ಸುಂದರವಾದ ವರ್ಣನೆಯು ಬಂದಿದೆ. ಅಲ್ಲದೆ, ಭಾಷಾಶಾಸ್ತ್ರದ ಅಭ್ಯಾಸದಿಂದಲೂ ಈ ಸಿದ್ಧಾಂತಕ್ಕೆ ಪುಷ್ಟಿ ದೊರೆಯುತ್ತದೆ. ತಂದೆ, ತಾಯಿ, ತಮ್ಮ, ಮೊಮ್ಮಗ, ಅಳಿಯ, ಮಾವ, ಅರಸು, ರಾಣಿ ಮುಂತಾದ ಶಬ್ದಗಳು ಸಂಸ್ಕೃತ, ಗ್ರೀಕ, ಲ್ಯಾಟಿನ್ ಮತ್ತು ಇಂಗ್ಲಿಷ ಭಾಷೆಗಳಲ್ಲಿ

ಬಹುಶಃ ಒಂದೇ ಪ್ರಕಾರದವಿರುತ್ತವೆ. ಇದರಿಂದ, ನಮ್ಮ ಆರ್ಯರು ಹಿಂದುಸ್ಥಾನಕ್ಕೆ ಬರುವ ಮುಂಚೆಯೇ ಅವರ ಸಮಾಜವು ತಕ್ಕ ಮಟ್ಟಿಗೆ ಊರ್ಜಿತಾವಸ್ಥೆಯನ್ನು ಹೊಂದಿ ಪಿತೃಪ್ರಧಾನ ಕುಟುಂಬ ವ್ಯವಸ್ಥೆಯು ಅವರಲ್ಲಿ ರೂಢವಾಗಿತ್ತೆಂದು ಹೇಳಲು ಅಡ್ಡಿ ಇಲ್ಲ. ಈ ಆರ್ಯರಲ್ಲಿ ಮೇಲೆ ಹೇಳಿದಂತೆ ಜನ ಅಥವಾ ಗಣಗಳು ಇದ್ದು ಅವು ಪ್ರಜಾಪತಿಗಳಿಂದ ಆಳಲ್ಪಡುತ್ತಿದ್ದವು. ಆರ್ಯರು ದೊಡ್ಡ ದೊಡ್ಡ ಪಟ್ಟಣಗಳನ್ನು ಕಟ್ಟಿಕೊಂಡಿದ್ದರು. ತಮ್ಮ ಗಣದ ಮುಖ್ಯಸ್ಥನಿಗೆ ಅವರು ಒಮ್ಮೊಮ್ಮೆ ' ರಾಜ ' ನೆಂದೂ ಹೆಸರು ಕೊಟ್ಟಿದ್ದರು. ಆದರೆ ರಾಜನೆಂದರೆ ಈಗಿನ ಅರ್ಥದಲ್ಲಿ ರಾಜನಲ್ಲ. ಗಣದ ಪ್ರಜಾಪತಿಗೇ ರಾಜನೆಂದು ಕರೆಯುತ್ತಿದ್ದರು. ಈ ಎರಡನೆಯ ಯುಗದಲ್ಲಿ ಆಗ ' ರಾಜ ' ಶಬ್ದಕ್ಕೆ ಮುಖ್ಯಸ್ಥನೆಂದು ಮಾತ್ರ ಅರ್ಥವು. ಒಂದು ಗಣದೊಳಗಿನ ಅನೇಕ ಕುಲಗಳು ಕೂಡಿ ಆರಿಸಿದ ಮುಖ್ಯಸ್ಥನವನು. ಇದರ ವಿವರಗಳನ್ನು ನಾವು ಮುಂದೆ ಗಣರಾಜ್ಯಗಳನ್ನು ಕುರಿತು ಹೇಳುವಾಗ ಹೇಳುವೆವು. ಇಲ್ಲಿ ಮುಖ್ಯವಾಗಿ ನೆನಪಿನಲ್ಲಿಡತಕ್ಕ ಮಾತೇನೆಂದರೆ ಆಗ ಪ್ರಜಾಪತಿ ಅಥವಾ ರಾಜನು ಪ್ರಜೆಗಳಿಂದ ಆರಿಸಲ್ಪಟ್ಟ ಒಬ್ಬ ವ್ಯಕ್ತಿಯು. ಆತನೇ ಮುಂದೆ ಅರಸನಾದನು. ಆದರೆ, ಅನೇಕ ಗಣಗಳು ಅರಸನನ್ನು (ಈಗಿನ ಅರ್ಥದಲ್ಲಿ) ಎಂದೂ ಆರಿಸದೆ ಪ್ರಜಾಸತ್ತಾತ್ಮಕವಾಗಿಯೇ ಉಳಿದಿದ್ದವು. ಕೆಲವುಗಳು ಮಾತ್ರ ಅರಸನನ್ನು ಆರಿಸಿಕೊಂಡವು. ಆತನೇ ಮುಂದೆ ವಂಶಪರಂಪರಾಗತ ಅರಸನಾದನು.

ಸಾರಾಂಶ, ರಾಜ್ಯಸಂಸ್ಥೆ ಅಥವಾ ಸರಕಾರವನ್ನು ಸ್ಥಾಪಿಸುವುದು ಪ್ರತಿಯೊಂದು ಸಮಾಜಕ್ಕೆ ಆಗಿನ ಪರಿಸ್ಥಿತಿಯಲ್ಲಿ ಅತ್ಯಂತ ಅವಶ್ಯವಾಗಿತ್ತು. ಮುಂಚೆ ಆ ಸರಕಾರವೆಂದರೆ ಕುಟುಂಬದ ಮುಖ್ಯಸ್ಥ. ಮುಂದೆ ಆ ಅಧಿಕಾರವು ಕುಲಪತಿಯಲ್ಲಿ ಬಂದಿತು. ಅದೇ ವಿಕಾಸ ಹೊಂದಿ ಪ್ರಜಾಪತಿಯ ಕೈಯಲ್ಲಿ ಸೇರಿತು. ಆತನು ಮೊದಲು ಜನರಿಂದ ಆರಿಸಲ್ಪಟ್ಟ ' ಅರಸ ' ನಾದನು. ಬರಬರುತ್ತ ಆತನು ವಂಶಪರಂಪರಾಗತ ಅರಸನಾಗಿ ಕುಳಿತನು.

ಇದೇ ಮೂರನೆಯ ಯುಗ. ಎರಡನೆಯ ಯುಗದಲ್ಲಿ ಅಂದರೆ ಅರಸನು ಜನರಿಂದ ಆರಿಸಲ್ಪಟ್ಟ ಯುಗದಲ್ಲಿ, ರಾಣಿಗಳದೊಂದು ವರ್ಗವಿತ್ತೆಂದೂ ಪುರೋಹಿತ ವರ್ಗದವರಿಂದ ಅವರಲ್ಲಿ ಹುಟ್ಟಿದವರೇ ಅರಸರಾಗುತ್ತಿದ್ದರೆಂದೂ ಅವರು ಬ್ರಹ್ಮಚಾರಿಗಳಾಗಿರುತ್ತಿದ್ದರೆಂದೂ ಡಾ. ಶ್ಯಾಮಶಾಸ್ತ್ರಿಗಳ ಅಭಿಪ್ರಾಯ. ಈ ತೆರಹದ ಸಂಸ್ಥೆಯು ಮಿಕ್ಕಾವ ದೇಶದಲ್ಲಿಯೂ ಕಂಡುಬರುವುದಿಲ್ಲ. ಈ ವಿಷಯವನ್ನು ಮುಂದೆ ನಾವು ವರ್ಣಿಸುವೆವು. ಇರಲಿ. ಮೂರನೆಯ ಯುಗವೆಂದರೆ ಅರಸನು ವಂಶಪರಂಪರಾಗತನಾದದ್ದು.

ರಾಜ್ಯಸಂಸ್ಥೆಯ ಅಥವಾ ಸರಕಾರದ ಉದಯವು ಹೇಗೆ ಮತ್ತು ಏಕೆ ಉಂಟಾಯಿತೆಂಬುದು ಮೇಲಿನ ವಿವೇಚನೆಯಿಂದ ಗೊತ್ತಾಗುವುದು. ಪ್ರಜೆಗಳನ್ನು ಸಂರಕ್ಷಿಸುವುದೇ ರಾಜ್ಯಸಂಸ್ಥೆಯ ಮುಖ್ಯ ಕರ್ತವ್ಯ. ಅಭ್ಯುದಯ ಅಂದರೆ ಆದಿಭೌತಿಕ ಹಿತ ಮತ್ತು ನಿಃಶ್ರೇಯಸ ಅಂದರೆ ಆಧ್ಯಾತ್ಮಿಕ ಉನ್ನತಿ ಇವುಗಳನ್ನು ಮಾಡುವುದೇ ರಾಜಧರ್ಮ. ಸಮಾಜವನ್ನು ಸುವ್ಯವಸ್ಥಿತವಾಗಿ ಧಾರಣಮಾಡುವುದೇ ವ್ಯಾಪಕವಾದ ಧರ್ಮ. ಇದನ್ನು ವಿವೇಚಿಸುವ ಶಾಸ್ತ್ರಕ್ಕೆ ಹಿಂದಿನ ಕಾಲದಲ್ಲಿ ಧರ್ಮಶಾಸ್ತ್ರವೆಂದು ಹೆಸರು. ರಾಜಧರ್ಮವೆಂಬುದು ಈ ವ್ಯಾಪಕವಾದ ಧರ್ಮಶಾಸ್ತ್ರದ ಒಂದು ಅಂಗವು. ಧರ್ಮಶಾಸ್ತ್ರವೆಂದರೆ ಸಮಾಜದಲ್ಲಿಯ ಯಾವತ್ತು ವ್ಯವಹಾರಗಳನ್ನು ಕುರಿತು ವಿವೇಚಿಸುವ ಶಾಸ್ತ್ರವು. ಈಗ ಅದಕ್ಕೆ ಸಮಾಜಶಾಸ್ತ್ರವೆನ್ನುತ್ತಾರೆ. ನಮ್ಮ ಸ್ಮೃತಿಗಳು ಈ ಪ್ರಕಾರದ ಸಮಾಜಶಾಸ್ತ್ರ ಗ್ರಂಥಗಳೆನ್ನಲು ಅಡ್ಡಿ ಇಲ್ಲ. ರಾಜಧರ್ಮವೂ ಈ ವ್ಯಾಪಕವಾದ ಧರ್ಮದ ಒಂದು ಅಂಗವಾಗಿರುವುದರಿಂದ, ಸ್ಮೃತಿಗ್ರಂಥಗಳಲ್ಲಿ ನಾವು ಈ ರಾಜಧರ್ಮದ ವಿವೇಚನೆಯನ್ನು ಕಾಣಬಹುದು. ಸಮಾಜದಲ್ಲಿ ಅರಸೊತ್ತಿಗೆಯ ಉದಯವು ಹೇಗೆ ಆಯಿತು, ರಾಜನ ಮುಖ್ಯ ಅವಯವಗಳಾವವು, ಅವುಗಳಲ್ಲಿಯ ಪರಸ್ಪರ ಸಂಬಂಧವೇನು, ರಾಜ್ಯಸಂಸ್ಥೆಯ ಮುಖ್ಯ ಧ್ಯೇಯವಾವುದು ಇವೇ ಮುಂತಾದ ವಿಷಯಗಳ ಬಗ್ಗೆ ಸ್ಮೃತಿಗ್ರಂಥಗಳಲ್ಲಿ ಚರ್ಚೆಯು ದೊರೆಯುತ್ತದೆ.

ಅರ್ಥಶಾಸ್ತ್ರವು ಸಮಾಜಶಾಸ್ತ್ರದ ಮತ್ತೊಂದು ಭಾಗವು. ಅದಕ್ಕೆ ಪ್ರಾಚೀನ ಕಾಲದಲ್ಲಿ 'ವಾರ್ತಾ' ಎಂದು ಹೆಸರಿತ್ತು. ಕೃಷಿ, ಪಶು ಪಾಲ್ಯ ಮತ್ತು ವಾಣಿಜ್ಯ ಇವು ವಾರ್ತಾಶಾಸ್ತ್ರದಲ್ಲಿ ವಿಚಾರಮಾಡಲ್ಪಡತಕ್ಕ ವಿಷಯಗಳು. ದೇಶದ ಉನ್ನತಿಗೆ ಈ ಅರ್ಥಶಾಸ್ತ್ರವು ಅವಶ್ಯವು. ಅದಕ್ಕೂ ರಾಜನೀತಿಶಾಸ್ತ್ರಕ್ಕೂ ಬಹಳ ಸಂಬಂಧವಿದೆ. ಆದುದರಿಂದಲೇ ಕೌಟಿಲ್ಯ ಮತ್ತು ಶುಕ್ರ ಇವರೇ ಮುಂತಾದ ಶಾಸ್ತ್ರಕಾರರು ಅವೆರಡೂ ವಿಷಯಗಳ ವಿಚಾರವನ್ನು ತಮ್ಮ ಗ್ರಂಥಗಳಲ್ಲಿ ಕೂಡಿಯೇ ಮಾಡಿದ್ದಾರೆ. ನ್ಯಾಯದಾನ ಮತ್ತು ಯುದ್ಧ ಇವೆರಡು ರಾಜನ ಮುಖ್ಯ ಶಕ್ತಿಗಳು. ಇವುಗಳ ಮೂಲಕವೇ ಆತನು ರಾಜ್ಯವನ್ನು ಸಂರಕ್ಷಿಸುತ್ತಿದ್ದನು. ಪ್ರಾಚೀನ ರಾಜನೀತಿಕಾರರು ರಾಜ್ಯಕ್ಕೆ ಸಪ್ತಾಂಗ ಶರೀರದ ಉಪಮೆಯನ್ನು ಕೊಟ್ಟಿರುವರು. ಈ ಅಂಗಗಳಿಗೆ 'ಪ್ರಕೃತಿ' ಎಂಬ ಪಾರಿಭಾಷಿಕ ಶಬ್ದವೂ ಉಪಯೋಗಿಸಲ್ಪಡುತ್ತದೆ. ಕೌಟಿಲ್ಯ, ಕಾಮಂದಕ ಮುಂತಾದ ಗ್ರಂಥಕರ್ತರು ಆ ಏಳು ಅಂಗಗಳನ್ನು ಹೇಳಿರುವರು. ಅವು ಯಾವುವೆಂದರೆ– (೧) ಸ್ವಾಮಿ–ರಾಜಾ (೨) ಅಮಾತ್ಯ (೩) ಜಾನಪದ ಅಥವಾ ರಾಷ್ಟ್ರ ಅಂದರೆ ಎಲ್ಲ ಪ್ರಜೆಗಳು (೪) ದುರ್ಗ (೫) ಕೋಶ (೬) ದಂಡ, ಬಲ ಅಥವಾ ಸೈನ್ಯ (೭) ಮಿತ್ರ ಅಥವಾ ಸುಹೃತ್ ಅರಸರು. ಇವುಗಳೊಳಗಿನ ಯಾವುದೊಂದು ಅಂಗವು ದುರ್ಬಲವಾದರೆ ರಾಜ್ಯಕ್ಕೆ ಹಾನಿ ತಟ್ಟುವುದು. ಅರಸನಾದವನಲ್ಲಿ ಇರತಕ್ಕ ಮುಖ್ಯ ಶಕ್ತಿಗಳೆಂದರೆ (೧) ಪ್ರಭುಶಕ್ತಿ ಅಂದರೆ ಉತ್ತಮವಾದ ಸೈನ್ಯ ಮತ್ತು ಕೋಶ ಇವುಗಳ ಮೂಲಕ ಉಂಟಾಗುವ ಶಕ್ತಿ (೨) ಮಂತ್ರಶಕ್ತಿ ಅಂದರೆ ಉತ್ಕೃಷ್ಟವಾದ ಮಂತ್ರಿಮಂಡಳದ ಸಹಾಯದಿಂದ ಆತನಲ್ಲಿ ಹುಟ್ಟುವ ಶಕ್ತಿ. (೩) ಉತ್ಸಾಹಶಕ್ತಿ ಅಂದರೆ ಸ್ವತಃ ರಾಜನಲ್ಲಿರುವ ವೀರ್ಯದ ಪ್ರಭಾವದ ಮೂಲಕ ಉತ್ಪನ್ನವಾಗುವ ಶಕ್ತಿ. ಈ ಮೂರು ಶಕ್ತಿಗಳ ಸಹಾಯದಿಂದ ಆತನು ಪ್ರಜೆಗಳನ್ನು ದುಷ್ಟ ಶತ್ರುಗಳಿಂದ ಸಂರಕ್ಷಿಸತಕ್ಕದ್ದು. ಈ ಶತ್ರುಗಳಲ್ಲಿ ಎರಡು ವಿಧ. (೧) ಅಂತಃಶತ್ರುಗಳು. (೨) ಬಾಹ್ಯಶತ್ರು

ಗಳು. ದೇಶದೊಳಗಿನ ದುಷ್ಟ ಜನರೂ ಉನ್ಮತ್ತರಾದ ಅಧಿಕಾರಿಗಳೂ ಅಂತಃಶತ್ರುಗಳು. ಇವರನ್ನು ದಂಡಿಸುವುದಕ್ಕೋಸ್ಕರ ನ್ಯಾಯಖಾತೆಯ ನಿರ್ಮಾಣವು. ರಾಜಸತ್ತೆಯು ಪ್ರಜೆಗಳ ಕೈಯಲ್ಲಿದ್ದಾಗ ದುಷ್ಟ ಅರಸನನ್ನು ತಳ್ಳುವ ಅಧಿಕಾರವು ಕೂಡ ಪ್ರಜಾಸಂಸ್ಥೆಗಳಿಗಿತ್ತು. ಏಕೆಂದರೆ ಅರಸನೂ ಮಿಕ್ಕ ಅಧಿಕಾರಿಗಳಂತೆ ಒಬ್ಬ ಅಧಿಕಾರಿಯೇ ಎಂದು ಆಗಿನ ಭಾವನೆ. ಬಾಹ್ಯಶತ್ರುಗಳೆಂದರೆ ಅರ್ಥಾತ್ ಹೊರಗಿನ ವೈರಿಗಳಾದ ಅರಸರು.

ಈ ರೀತಿಯಾಗಿ ಪ್ರಜಾಪಾಲನ ಮಾಡುವುದಕ್ಕೋಸ್ಕರ ಸರಕಾರದ ಕೈಯಲ್ಲಿ ಕೆಲವು ಅಧಿಕಾರಗಳನ್ನು ಕೊಡುವುದು ಅವಶ್ಯ. ಆ ಅಧಿಕಾರಗಳು ಯಾವುವೆಂದರೆ- (೧) ಕಾಯದೆಗಳನ್ನು ಮಾಡುವುದು. (೨) ಆ ಕಾಯದೆಗಳನ್ನು ಜ್ಯಾರಿಯಲ್ಲಿ ತರುವುದು. (೩) ನ್ಯಾಯ ಕೊಡುವುದು. ಇವು ಮೂರು ಸರಕಾರದ ಮುಖ್ಯ ಕರ್ತವ್ಯಗಳು.

ಈ ಮೂರೂ ಅಂಗಗಳ ವಿಸ್ತಾರವಾದ ವಿವೇಚನೆಯನ್ನು ಮುಂದೆ ಕೊಡುವೆವು. ಇಲ್ಲಿ ಮುಖ್ಯವಾಗಿ ಹೇಳತಕ್ಕದ್ದೇನೆಂದರೆ, ರಾಜ್ಯಾಧಿಪತ್ಯವನ್ನು ಅಥವಾ ಸರಕಾರವನ್ನು ಸ್ಥಾಪಿಸಿಕೊಳ್ಳುವುದು ಪ್ರತಿಯೊಂದು ಸಮಾಜಕ್ಕೂ ಆಗಿನ ಪರಿಸ್ಥಿತಿಯಲ್ಲಿ ಅವಶ್ಯವಾಯಿತು. ರಾಜ್ಯಸಂಸ್ಥೆಯ ಉದಯಕ್ಕೆ ಇದೇ ಮೂಲ ಕಾರಣ. ಪ್ರಜೆಗಳನ್ನು ಸಂರಕ್ಷಿಸಿ ರಾಜ್ಯದ ಅಭ್ಯುದಯ ಮತ್ತು ನಿಃಶ್ರೇಯಸ್ಸುಗಳನ್ನು ಸಂಪಾದಿಸುವುದೇ ರಾಜಧರ್ಮ. ಮಹಾಭಾರತದಲ್ಲಿ ರಾಜಧರ್ಮದ ವ್ಯಾಖ್ಯೆಯು ಹೀಗೆ ಕೊಡಲ್ಪಟ್ಟಿದೆ.

**ಅಸತೋ ಪ್ರತಿಷೇಧಶ್ಚ ಸತಾಂಚ ಪರಿಪಾಲನಮ್ ।**
**ಏಷ ರಾಜ್ಞಾಂ ಪರೋ ಧರ್ಮಃ ಸಮರೇ**
**ಚಾಪ್ಯಪಲಾಯನಮ್ ।**

---

## ೫ನೆಯ ಪ್ರಕರಣ

# ಸಭಾ ಮತ್ತು ಸಮಿತಿ



### ಕ್ರಿ. ಪೂ. ೪೫೦೦ ಕ್ಕಿಂತಲೂ ಹಿಂದಿನ ಕಾಲ

ನಮ್ಮ ಎಲ್ಲಕ್ಕೂ ಪುರಾತನ ಗ್ರಂಥಗಳೆಂದರೆ ವೇದಗಳಷ್ಟೆ. ಅವುಗಳಿಂದ ಆಗಿನ ಕಾಲದ ರಾಜ್ಯಪದ್ಧತಿಗಳ ವಿಷಯವಾಗಿ ನಮಗೆ ಏನು ಗೊತ್ತಾಗುತ್ತದೆಂಬುದನ್ನು ನೋಡುವ. ವೇದಗಳು ಸಾಕ್ಷಾತ್ತಾಗಿ ರಾಜ್ಯತಂತ್ರ ಪುಸ್ತಕಗಳಲ್ಲ. ಆದುದರಿಂದ, ಅರ್ಥಾತ್, ಅವುಗಳಲ್ಲಿ ಈ ವಿಷಯವು ಸ್ಪಷ್ಟವಾಗಿಯೂ ಸಶಾಸ್ತ್ರವಾಗಿಯೂ ಉಲ್ಲೇಖವಾಗಿಲ್ಲ. ಅಲ್ಲಲ್ಲಿ ದೊರೆಯುವ ಉಲ್ಲೇಖಗಳ ಮೇಲಿಂದ, ಆ ಕಾಲದಲ್ಲಿ ಯಾವ ತರಹದ ರಾಜ್ಯಪದ್ಧತಿಗಳಿರಬಹುದೆಂಬುದನ್ನು ನಾವು ಊಹಿಸಬೇಕಾಗುತ್ತದೆ. ಆ ಕಾಲಕ್ಕೆ ಲೋಕಸತ್ತಾತ್ಮಕ ರಾಜ್ಯಪದ್ಧತಿಗಳು ಇದ್ದವೆಂಬ ಬಗ್ಗೆ ಆಧಾರಗಳುಂಟು. ಆದರೆ, ರಾಜಸತ್ತಾತ್ಮಕ ರಾಜ್ಯಗಳೂ ಕೆಲವು ಇದ್ದವೆಂದು ಹೇಳಬಹುದು. ಅವುಗಳಲ್ಲಿ, ಒಟ್ಟಿನ ಮೇಲೆ ಯಾವ ತರಹದ ರಾಜ್ಯಪದ್ಧತಿಗೆ ಪ್ರಾಬಲ್ಯವಿತ್ತೆಂದು ಕೇಳಿದರೆ ಮಾತ್ರ, ಲೋಕಸತ್ತಾತ್ಮಕ ರಾಜ್ಯಪದ್ಧತಿಗಳೇ ವಿಶೇಷವಾಗಿದ್ದವೆಂದು ಕಾಣುತ್ತದೆ. ವೇದಕಾಲವೆಂಬುದೇನೂ ಒಂದೇ ಕಾಲವಲ್ಲ. ಅದೂ ಒಂದು ಬಹುದೀರ್ಘವಾದ ಕಾಲ. ಅದರಲ್ಲಿಯೂ ಅನೇಕ ಚಿಕ್ಕ ದೊಡ್ಡ ಕಾಲವಿಭಾಗಗಳನ್ನು ಮಾಡಬಹುದು. ನಮ್ಮ ಆರ್ಯರು ಹಬ್ಬಿಕೊಂಡಿರುವ ಪ್ರದೇಶವೂ ವಿಸ್ತಾರವಾದದ್ದಿತ್ತು. ಅವೆಲ್ಲ ವಿಭಾಗಗಳಲ್ಲಿ ಒಂದೇ ತರಹದ ರಾಜ್ಯಪದ್ಧತಿಯು ರೂಢವಾಗಿರುವುದು ಶಕ್ಯವಿಲ್ಲ. ಆದರೆ, ವೇದಗಳನ್ನೋದಿದರೆ, ಅವುಗಳಲ್ಲಿ ಕೆಲವು ಪ್ರಜಾಸಂಸ್ಥೆಗಳ ಉಲ್ಲೇಖವು ಅನೇಕ ಕಡೆಗೆ ಬರುತ್ತದೆ. ಅದರ ಮೇಲಿಂದ ಆ ಕಾಲದಲ್ಲಿ ಆ ಪ್ರಜಾಸಂಸ್ಥೆಗಳ ಪ್ರಾಬಲ್ಯವಿತ್ತೆಂದು ಊಹಿಸಲು ಅಡ್ಡಿ ಇಲ್ಲ. ಆದರೆ ವೇದಗಳು ಪ್ರತ್ಯಕ್ಷ ರಾಜನೀತಿ

ಶಾಸ್ತ್ರದ ಗ್ರಂಥಗಳಾಗದೆ ಇರುವುದರಿಂದ ಅವುಗಳಲ್ಲಿ ಈ ಪ್ರಜಾ ಸಂಸೆಗಳ ವಿಷಯಕ್ಕೆ ನಮಗೆ ಸ್ಪಷ್ಟವಾದ ಮತ್ತು ಪೂರ್ಣವಾದ ಜ್ಞಾನವು ಆಗುವುದಿಲ್ಲ.

ವೇದಗಳಲ್ಲಿ, 'ಸಮಿತಿ' 'ಸಭೆ' 'ಜನತೆ' ಎಂಬ ಶಬ್ದಗಳು ಅನೇಕ ಸಂದರ್ಭಗಳಲ್ಲಿ ಬರುತ್ತವೆ. ಇವೇ ಆಗಿನ ಕಾಲದ ಮುಖ್ಯ ರಾಜಕೀಯ ಸಂಸ್ಥೆಗಳು. ನಮ್ಮ ದೇಶದ ಆರ್ಯ ಜನರಂತೆಯೇ ಮಿಕ್ಕ ಕಡೆಯ ಆರ್ಯ ಜನರೂ ತಮ್ಮ ಗುಂಪುಗಳ ರಾಜ್ಯವ್ಯವಸ್ಥೆಯನ್ನು ಎಲ್ಲರೂ ಒಂದೆಡೆಗೆ ಕೂಡಿ, ಸಭೆ ಮಾಡಿ ನಿರ್ಣಯಿಸಿಕೊಳ್ಳುತ್ತಿದ್ದರು. ಗ್ರೀಕರು ಎರಿಯೋಪಗಸ್ (Areopagus) ರೋಮನ್ ಜನರು ಕ್ಯೂರಿಯಾ (Curia) ಆಂಗ್ಲೋ ಸ್ಯಾಕ್ಸನ್ ಜನರು 'ವಿಟನಗಮಾಟ್' (Witenmagemot) ಮುಂತಾದ ಸಭೆಗಳ ಮುಖಾಂತರವಾಗಿ ತಮ್ಮ ರಾಜಕೀಯ ಪ್ರಶ್ನೆಗಳನ್ನು ನಿರ್ಧರಿಸಿಕೊಳ್ಳುತ್ತಿದ್ದರು. ಅದೇ ಪ್ರಕಾರ ನಮ್ಮ ಪೂರ್ವಜರಿಗೆ 'ಸಭೆ' ಅಥವಾ 'ಸಮಿತಿ' ಗಳಿದ್ದವು.

ವೇದಗಳಲ್ಲಿ ಸಭಾ, ಸಮಿತಿ ಅಥವಾ ಜನತೆ ಎಂಬ ಶಬ್ದಗಳಿಗೆ ಲೋಕನಿಯುಕ್ತ ಕಾರ್ಯನಿರ್ವಾಹಕ ಮಂಡಳವೆಂದು ಅರ್ಥ. ಇತ್ತೀಚಿನ ಕಾಲದಲ್ಲಿ ಇಂಥ ಸಂಸ್ಥೆಗಳಿಗೆ 'ಪರಿಷತ್' ಎಂದು ಕರೆಯುವ ವಾಡಿಕೆಯುಂಟಾಯಿತು. ಸಾರಾಂಶ. ಸಾರ್ವಜನಿಕ ಸಂಸ್ಥೆಗಳ ಮುಖಾಂತರವಾಗಿ ಆಗಿನ ಯಾವತ್ತು ರಾಜ್ಯಕಾರಭಾರವು ನಡೆಯುತ್ತಿತ್ತು. ಇಂಥ ಸಂಸ್ಥೆಗಳಲ್ಲಿ, 'ಸಮಿತಿ' ಎಂಬುದೇ ಎಲ್ಲಕ್ಕೂ ದೊಡ್ಡ ಸಂಸ್ಥೆ. ಸಮಿತಿಯೆಂದರೆ ಕೂಟ. ಇದು ಆಗಿನ ರಾಷ್ಟ್ರೀಯ ಸಭೆ ಅಥವಾ ಪಾರ್ಲಮೆಂಟ. ಯಾವತ್ತು ಪ್ರಜೆಗಳ **(ವಿಶಃ)** ಕೂಟಕ್ಕೆ ಸಮಿತಿಯೆಂದು ಹೆಸರು. ಈ ಕೂಟದ ಮುಖ್ಯ ಕಾರ್ಯಗಳು ಯಾವುವೆಂದರೆ—

(೧) 'ರಾಜ' ನನ್ನು ಆರಿಸುವುದು.

(೨) ಗಣದ ಯಾವತ್ತು ರಾಜಕೀಯ ಕೆಲಸಗಳನ್ನು ಜರುಗಿಸುವುದು.

(೩) ಅಲ್ಲದೆ ಮಿಕ್ಕ ತೆರಹದ ರಾಷ್ಟ್ರಹಿತದ ಕೆಲಸಗಳನ್ನು ಕೈಕೊಳ್ಳುವುದು.

ರಾಜನು ಈ ಸಮಿತಿಯ ಸಭೆಗಳಿಗೆ ಹಾಜರ ಇರಬೇಕಾಗುತ್ತಿತ್ತು. ಈ ಸಮಿತಿಯ ಅಧ್ಯಕ್ಷನಿಗೆ 'ಈಶಾನ' ನೆಂದು ಹೆಸರು. ಸಮಿತಿಯೆಂದರೆ ಯಾವತ್ತು ಪ್ರಜೆಗಳ ಕೂಟವೆಂದು ಮೇಲೆ ಹೇಳಿದೆವಷ್ಟೆ. ಆದರೆ ಪ್ರಾತಿನಿಧಿಕ ತತ್ವವು ಅಂದರೆ ಪ್ರತಿನಿಧಿಗಳ ಮೂಲಕ ಕಾರ್ಯನಡಿಸುವ ತತ್ವವು, ವೇದಕಾಲದಲ್ಲಿ, ಕೆಲವು ಕಡೆಗೆ ಪ್ರಚಾರದಲ್ಲಿ ಇತ್ತು. ಹಳ್ಳಿಗಳು ಈ ಬಗೆಯಾಗಿ ತಮ್ಮ ಪ್ರತಿನಿಧಿಗಳನ್ನು ಸಮಿತಿಗಳಿಗೆ ಕಳುಹಿಸುತ್ತಿದ್ದವು.

ವೇದಕಾಲದ ಮತ್ತೊಂದು ರಾಜಕೀಯ ಸಂಸ್ಥೆಯೆಂದರೆ 'ಸಭೆ'. ಈ 'ಸಭೆ' ಗೂ 'ಸಮಿತಿ' ಗೂ ನಡುವೆ ಯಾವ ಬಗೆಯ ಸಂಬಂಧವಿತ್ತೆಂಬುದು ಸ್ಪಷ್ಟವಾಗಿ ಗೊತ್ತಾಗುವುದಿಲ್ಲ. ಬಹುಶಃ ಅದು ಸಮಿತಿಯಿಂದ ಆರಿಸಲ್ಪಟ್ಟ ಸದಸ್ಯರದೊಂದು ಮಂಡಲವೆಂದು ಶ್ರೀ. ಜಯಸ್ವಾಲ ಇವರ ಅಭಿಪ್ರಾಯ. 'ಭಾ' ಎಂದರೆ ಹೊಳೆ. 'ಸಭೆ' ಯೆಂದರೆ ಕೂಡಿ ಹೊಳೆಯುವ ಒಂದು ಕೂಟ. ಸಭೆಯಲ್ಲಿಯ ಒಬ್ಬೊಬ್ಬ ಸದಸ್ಯನಿಗೆ ವ್ಯಕ್ತಿಶಃ ಏನೂ ಬೆಲೆ ಇಲ್ಲ. ಸದಸ್ಯರೆಲ್ಲರೂ ಕೂಡಿದರೆ ಅದಕ್ಕೆ ಒಂದು ಬಗೆಯ ತೇಜವು ಉಂಟಾಗುತ್ತದೆ. ಅದರಲ್ಲಿ ಒಂದು ತರಹದ ಶಕ್ತಿಯುಂಟಾಗುತ್ತದೆ. ಸಭೆಯ ಅಧ್ಯಕ್ಷನಿಗೆ 'ಸಭಾಪತಿ' ಎಂದು ಹೆಸರು. ಈ ಸಭೆಯ ಮುಖ್ಯ ಕಾರ್ಯವು ನ್ಯಾಯವಿಧಾಯಕ ಕೆಲಸವು. ಋಗ್ವೇದದ ಕೊನೆಯ ಕಾಲದಿಂದ ಈ 'ಸಭೆಗಳು' ಅಸ್ತಿತ್ವದಲ್ಲಿ ಬಂದವು.

ಈ 'ಸಭೆ' 'ಸಮಿತಿ' ಗಳಲ್ಲದೆ 'ವಿದಥ' ಎಂಬ ಸಂಸ್ಥೆಗಳಿದ್ದವು. ಅವು ಧಾರ್ಮಿಕ ಸಂಸ್ಥೆಗಳು. ಅವು ಸಮಿತಿಗಳಿಗಿಂತಲೂ ಪ್ರಾಚೀನ ಸಂಸ್ಥೆಗಳು. ಇವಲ್ಲದೆ 'ಸೇನಾ' ಎಂಬದೊಂದು ಸಂಸ್ಥೆಯಿತ್ತು. "ಸೇನಾ" ಎಂದರೆ ಜನಾಂಗವೆಲ್ಲವೂ ಆಯುಧಧಾರಿಯಾದ ಸಂಸ್ಥೆ. 'ವಿದಥ' ಎಂಬುದೊಂದೇ ಮೂಲ ಸಂಸ್ಥೆಯಿದ್ದು

ಮುಂದೆ ಅದು ಒಡೆದು 'ಸಮಿತಿ' 'ಸಭೆ' 'ಸೇನಾ' ಎಂಬುದಾಗಿ ಮೂರು ಬೇರೆ ಬೇರೆ ಸಂಸ್ಥೆಗಳಾದಂತೆ ತೋರುತ್ತದೆ.

ಸಾರಾಂಶ, ವೇದಕಾಲದ ವಿಷಯವಾಗಿ ನಮಗೆ ವಿಶೇಷ ವಿವರಗಳು ಗೊತ್ತಾಗುವುದಿಲ್ಲವಾದರೂ ಆಗಿನ ಕಾಲದ ರಾಜಕೀಯ ಸಂಸ್ಥೆಗಳು ಯಾವ ಬಗೆಯವು ಇದ್ದವೆಂಬ ಬಗ್ಗೆ ತುಸು ಮಟ್ಟಿಗೆ ಸ್ಪಷ್ಟವಾದ ಕಲ್ಪನೆ ಬರುತ್ತದೆ. ಆಗಿನ ಕಾಲದಲ್ಲಿ ಅರಸೊತ್ತಿಗೆಗೆ ಪ್ರಾಧಾನ್ಯವಿದ್ದಿಲ್ಲ. ರಾಜ್ಯದ ಸೂತ್ರಗಳು ಪ್ರಜೆಗಳ ಕೈಯಲ್ಲಿಯೇ ಇದ್ದವು. ಪ್ರಜೆಗಳು ಅನೇಕ ಸಂಸ್ಥೆಗಳನ್ನು ನಿರ್ಮಾಣ ಮಾಡಿಕೊಂಡು ರಾಜ್ಯ ಕಾರಭಾರ ನಡಿಸುತ್ತಿದ್ದರು.

———

## ೬ನೆಯ ಪ್ರಕರಣ

# ಗಣರಾಜ್ಯ ಪದ್ಧತಿಗಳು



### ಕ್ರಿ. ಪೂ. ೪೫೦೦ ರಿಂದ ಕ್ರಿ. ಶ. ೫೫೦ ರ ವರೆಗೆ

ಅತಿಪ್ರಾಚೀನ ವೈದಿಕ ಕಾಲದ ರಾಜ್ಯವ್ಯವಸ್ಥೆಯ ವಿಷಯವಾಗಿ ಸಾಕಷ್ಟು ವಿವರಗಳು ಗೊತ್ತಿಲ್ಲದಿದ್ದರೂ ಕ್ರಿಸ್ತಶಕದ ಪೂರ್ವದಲ್ಲಿ ೪೫೦೦ ವರ್ಷಗಳಿಂದ ಕ್ರಿಸ್ತಶಕದ ೫೫೦ನೆಯ ಇಸ್ವಿಯ ವರೆಗಿನ ಅಂದರೆ ಸುಮಾರು ೪–೫ ಸಾವಿರ ವರ್ಷಗಳ ರಾಜಕೀಯ ಸಂಸ್ಥೆಗಳ ಇತಿಹಾಸವು ನಮಗೆ ಹೆಚ್ಚಿಗೆ ಉಪಲಬ್ಧವಾಗಿದೆ. ಈ ಅವಧಿಯಲ್ಲಿ ನಮ್ಮ ದೇಶದಲ್ಲಿ ಲೋಕಸತ್ತಾತ್ಮಕ ರಾಜ್ಯಪದ್ಧತಿಯೇ ಮುಖ್ಯ ರಾಜ್ಯಪದ್ಧತಿಯಾಗಿತ್ತು, ಎಂದರೆ, ರಾಜಕೀಯ ಅಧಿಕಾರವು ಪ್ರಜೆಗಳ ಕೈಯಲ್ಲಿ ಇತ್ತು. ರಾಜನ ಕೈಯಲ್ಲಿ ಇದ್ದಿಲ್ಲ. ಈ ರಾಜ್ಯ ಪದ್ಧತಿಗಳಿಗೆ ಗಣರಾಜ್ಯಪದ್ಧತಿಗಳೆಂದು ಕರೆಯುತ್ತಿದ್ದರು. ಗಣವೆಂದರೆ ಬಹು ಸಂಖ್ಯೆ. ಆದ ಕಾರಣ, ಗಣರಾಜ್ಯಪದ್ಧತಿಯೆಂದರೆ ಬಹು

ಸಂಖ್ಯಾಕ ರಾಜ್ಯಪದ್ಧತಿ (Democracy). ಪಾಣಿನಿಯ ಕಾಲಕ್ಕೆ ಇವುಗಳಿಗೆ 'ಸಂಘ' ವೆಂದು ಹೆಸರು ಇತ್ತು. ಗಣ ಅಥವಾ ಸಂಘ ವೆಂದರೆ ಪ್ರಜಾಸತ್ತಾತ್ಮಕ ರಾಜ್ಯ. ನಮ್ಮ ಜನರು ತಮ್ಮ ಸ್ವರಾಜ್ಯವನ್ನು ತಾವು ಹೇಗೆ ನಡಿಸುತ್ತಿದ್ದರೆಂಬುದಕ್ಕೆ ಈ ಗಣರಾಜ್ಯ ಪದ್ಧತಿಗಳು ಉತ್ಕೃಷ್ಟವಾದ ಉದಾಹರಣೆಗಳು. ವೈದಿಕ ಕಾಲದಲ್ಲಿಯ ಅರಸೊತ್ತಿಗೆಯು ಕೂಡ ಏಕತಂತ್ರವಾಗಿರಲಿಲ್ಲ. ಅದು ಪ್ರಜಾ ಸತ್ತಾತ್ಮಕ ಪದ್ಧತಿಗೆ ತೀರ ಸಮೀಪವಾಗಿತ್ತು. ಇರಲಿ.

ಈ ತರಹದ ಸಂಘ ರಾಜ್ಯಗಳು ಎರಡು ಪ್ರಕಾರದವಿದ್ದವೆಂದು ಕೌಟಿಲ್ಯನು ಹೇಳುತ್ತಾನೆ. (೧) ಕೆಲವು ಸಂಘಗಳಲ್ಲಿಯ ಕಾರ್ಯ ನಿರ್ವಾಹಕ ಮಂಡಳದ ಮುಖ್ಯಸ್ಥನಿಗೆ 'ರಾಜ' ನೆಂಬ ಬಿರುದು ಇತ್ತು. (೨) ಕೆಲವುಗಳಲ್ಲಿ ಹಾಗೆ ಬಿರುದು ಇದ್ದಿಲ್ಲ. ಇವೆರಡೂ ತರಹದ ರಾಜ್ಯಪದ್ಧತಿಗಳಲ್ಲಿ, ಲಷ್ಕರಿ ಶಿಕ್ಷಣವು ಕಡ್ಡಾಯವಾಗಿದ್ದಿಲ್ಲ. ಆದರೆ, ಪ್ರತಿಯೊಬ್ಬನು ಯಾವುದೊಂದು ಉದ್ಯೋಗವನ್ನು ಮಾಡಲೇಬೇಕೆಂದು ನಿರ್ಬಂಧವಿತ್ತು. ಹಲಕೆಲವು ಸಂಘಗಳಲ್ಲಿ ಮಾತ್ರ ಲಷ್ಕರಿ ಶಿಕ್ಷಣವು ಕಡ್ಡಾಯವಾಗಿತ್ತು.

ಇವೆಲ್ಲ ಸಂಘಗಳಲ್ಲಿಯ ರಾಜ್ಯಕಾರಭಾರ ಪದ್ಧತಿಯು ಒಂದೇ ಪ್ರಕಾರದ್ದಿರಲಿಲ್ಲ, ಬೇರೆ ಬೇರೆಯಾಗಿತ್ತು. (೧) ಅಂಬಷ್ಟರ ಪ್ರಜಾ ಸತ್ತಾತ್ಮಕ ರಾಜ್ಯಪದ್ಧತಿಯಲ್ಲಿ, ಹಿರಿಯರದೊಂದು ವರಿಷ್ಠ ಮಂಡಲವಿತ್ತು. ಈ ಜನಾಂಗದಲ್ಲಿ, ಪ್ರತಿಯೊಬ್ಬನಿಗೆ ಮತಾಧಿಕಾರವಿತ್ತು. (೨) ಕ್ಷುದ್ರಕ ಮತ್ತು ಮಾಳವರಿಗೆ ರಾಜನೆಂಬುದೇ ಗೊತ್ತಿರಲಿಲ್ಲ. ಅವರು ತಮ್ಮ ಸೇನಾನಾಯಕನನ್ನು ತಾವೇ ಆರಿಸುತ್ತಿದ್ದರು. (೩) ಕಠರಾಜ್ಯದಲ್ಲಿ ಅವರು ಒಬ್ಬ 'ಅರಸ'ನನ್ನು ಆರಿಸಿಕೊಳ್ಳುತ್ತಿದ್ದರು. ಆದರೆ ಈ ಅರಸನೆಂದರೆ ಅನಿಯಂತ್ರಿತ ಅಧಿಕಾರಿಯಲ್ಲ, ಪ್ರಜೆಗಳ ಕೈಯೊಳಗಿನ ಗೊಂಬೆ. ಈ ರಾಜ್ಯಗಳಲ್ಲಿಯ ಕಾರ್ಯನಿರ್ವಾಹಕ ಅಧಿಕಾರವು (Executive) ಕೆಲವೊಮ್ಮೆ ಹಿರಿಯರದೊಂದು ಮಂಡಲದ ಕೈಯಲ್ಲಿ ಇರುತ್ತಿತ್ತು. ಅವರಿಗೆ ಮಂತ್ರಧರರೆಂದು ಹೆಸರು. ಆದರೆ, ಹೀಗೆ ಹಲಕೆಲವು ವ್ಯಕ್ತಿಗಳ ಕೈಯಲ್ಲಿ ಕಾರ್ಯನಿರ್ವಾಹಕ ಅಧಿಕಾರವನ್ನು

ಕೊಡದೆ, ಅದನ್ನು ಇಡೀ ಜನಾಂಗದ ಮುಖ್ಯ ಸಭೆಯ ಅಂದರೆ ಗಣ (Parliament) ದ ಕೈಯಲ್ಲಿ ಇಡುವುದರ ಕಡೆಗೇ ಆಗಿನ ಜನರ ಪ್ರವೃತ್ತಿ ಹೆಚ್ಚು. ಈ ಗಣಗಳಲ್ಲಿ ೫೦೦೦ ದ ವರೆಗೆ ಸದಸ್ಯರು ಇರುತ್ತಿದ್ದ ದೊಡ್ಡ ದೊಡ್ಡ ಗಣಗಳೂ ಇದ್ದವು. ಕೆಲಕೆಲವು ಗಣರಾಜ್ಯಗಳಲ್ಲಿ ಮಾತ್ರ, ಈ ಅಧಿಕಾರವು ಹಿರಿಯರ ಅಥವಾ ಕುಲಗಳ ಕಡೆಗೆ ಹೋಗಿತ್ತು. ಆದರೂ ಆ ಕುಲಗಳೂ ಕೂಡ ಪ್ರಜೆಗಳ ನಿಯಂತ್ರಣಕ್ಕೆ ಒಳಗಾಗಿಯೇ ಇದ್ದವು. ಸಾರಾಂಶ, ಕೆಲವುಗಳಲ್ಲಿ ಗಣಗಳಿಗೆ ಹೆಚ್ಚು ಪ್ರಾಬಲ್ಯ; ಮತ್ತೆ ಕೆಲವುಗಳಲ್ಲಿ, ಕುಲಗಳಿಗೆ ಹೆಚ್ಚಿಗೆ ಪ್ರಾಬಲ್ಯ. ಇವೆರಡು ಪದ್ಧತಿಗಳ ನಡುವಿನ ಅನೇಕ ಸಮ್ಮಿಶ್ರ ರಾಜ್ಯಪದ್ಧತಿಗಳೂ ಇದ್ದವು. ಅವುಗಳ ಕೆಲವು ಪ್ರಕಾರಗಳನ್ನು ಇಲ್ಲಿ ಕೊಡುತ್ತೇವೆ. (೧) **ಭೌಜ್ಯ**– ಇದು ಪಶ್ಚಿಮ ಹಿಂದುಸ್ಥಾನದಲ್ಲಿ ಪ್ರಬಲವಿತ್ತು. ಪೂರ್ವದಲ್ಲಿಯೂ ಕೆಲವು ರಾಜ್ಯಗಳಲ್ಲಿ ಇದು ರೂಢವಾಗಿತ್ತು. ಇದರಲ್ಲಿಯ ಗಣಮುಖ್ಯನು ವಂಶಪರಂಪರಾಗತನಲ್ಲ. ಸಾತ್ವತ ಯಾದವರೂ ಅಂಧಕವೃಷ್ಣಿ ಮತ್ತು ಕಾಠೇವಾಡದಲ್ಲಿಯ ಮತ್ತೆ ಕೆಲವು ರಾಜ್ಯಗಳೂ ಭೌಜ್ಯರಾಜ್ಯಗಳು. ಇದು ಎಲ್ಲಕ್ಕೂ ಪ್ರಾಚೀನ ರಾಜ್ಯಪದ್ಧತಿ. ರಾಜ್ಯಾಧಿಕಾರವು (Sovereignty) ಹಿರಿಯರ ಕೈಯಲ್ಲಿತ್ತು. (೨) **ಸ್ವಾರಾಜ್ಯ**– ಇದು ಪಶ್ಚಿಮ ಹಿಂದುಸ್ಥಾನದ ವಿಶಿಷ್ಟ ಪದ್ಧತಿಯು. ಇದರಲ್ಲಿಯ ಮುಖ್ಯಸ್ಥನಿಗೆ 'ಸ್ವರಾಟ್' (Self-ruler) ಎಂದು ಹೆಸರು. ಆತನನ್ನು ಪ್ರಜೆಗಳು ಆರಿಸಬೇಕಾಗುತ್ತಿತ್ತು. ಯಜುರ್ವೇದದ ಕಾಲದಲ್ಲಿ, ಈ ತರಹದ ಪದ್ಧತಿಯು ಉತ್ತರ ಹಿಂದುಸ್ಥಾನದಲ್ಲಿಯೂ ಇತ್ತು. (೩) **ವೈರಾಜ್ಯ**– ಇದು ಹಿಮಾಲಯದ ಹತ್ತರವಿದ್ದ ಪ್ರದೇಶಗಳಲ್ಲಿ ಪ್ರಚಲಿತವಾಗಿತ್ತು. ವೈರಾಜ್ಯವೆಂದರೆ ರಾಜನಿಲ್ಲದಿರುವ ರಾಜ್ಯಪದ್ಧತಿ. ಇಡೀ ಜನಾಂಗವು ಕೂಡಿ ಅರಸೊತ್ತಿಗೆಯನ್ನು ನಡಿಸುತ್ತಿತ್ತು. ಇದು ಶುದ್ಧ ಪ್ರಜಾಸತ್ತಾತ್ಮಕ ರಾಜ್ಯಪದ್ಧತಿ. ಉತ್ತರ ಮದ್ರ ಮತ್ತು ಉತ್ತರ ಕುರು ರಾಜ್ಯಗಳು ಈ ತರಹದ ವೈರಾಜ್ಯ ರಾಜ್ಯಗಳು. ಇದರಲ್ಲಿಯ ಮುಖ್ಯಸ್ಥನಿಗೆ 'ವಿರಾಜ'ನೆಂದು ಹೆಸರು. (೪) **ದ್ವೈರಾಜ್ಯ**–

ಇದರಲ್ಲಿ ಇಬ್ಬರು ರಾಜರು. ಇದು ಈ ದೇಶದ ವೈಲಕ್ಷಣ್ಯವು. ಅವಂತಿ ಅಥವಾ ಉಜ್ಜಯನಿಯು ಕೆಲಕಾಲ ಈ ತರಹದ ರಾಜ್ಯವಾಗಿತ್ತು. ಅದಕ್ಕೆ ವಿಂದ ಮತ್ತು ಅನುವಿಂದ ಎಂಬಿಬ್ಬ ಅರಸರು ಇದ್ದರೆಂಬುದು ಮಹಾಭಾರತದಿಂದ ಗೊತ್ತಾಗುತ್ತದೆ. ನೇಪಾಳದಲ್ಲಿ ಈ ತರಹದ ರಾಜ್ಯಪದ್ಧತಿಯು ಕ್ರಿಸ್ತಶಕದ ೬ ಮತ್ತು ೭ನೆಯ ಶತಮಾನಗಳಲ್ಲಿ ಕೂಡ ಇತ್ತು.

ಜೈನಸೂತ್ರಗಳಲ್ಲಿ ಇನ್ನೂ ಕೆಲವು ರಾಜ್ಯಪದ್ಧತಿಗಳ ಉಲ್ಲೇಖ ವಿದೆ. ವಿರುದ್ಧ ರಾಜ್ಯಗಳು, ಉಗ್ರ ರಾಜ್ಯಗಳು, ರಾಜನ್ಯ ರಾಜ್ಯಗಳು ಇವೇ ಮುಂತಾದವುಗಳು. ಆದರೆ ಅವು ಮಹತ್ವದವುಗಳಲ್ಲ.

**ಈಗಣ ರಾಜ್ಯಪದ್ಧತಿಗಳ ಕಾರ್ಯಪದ್ಧತಿ:-** ಗಣರಾಜ್ಯ ಪದ್ಧತಿಯಲ್ಲಿ ಮತಾಧಿಕಾರವುಳ್ಳವರೆಲ್ಲರೂ ಸಭೆಯಲ್ಲಿ ನೆರೆಯುತ್ತಿದ್ದರು; ಮತ್ತು ಅಧಿಕಾರಿಯೊಬ್ಬನು ತಮ್ಮಗೋಸ್ಕರ ಮುಂಚಿತವಾಗಿಯೇ ಗೊತ್ತುಪಡಿಸಿದ ಸ್ಥಳಗಳಲ್ಲಿ ಕುಳಿತುಕೊಳ್ಳುವರು. ಪ್ರತಿಯೊಂದು ವಿಷಯದ ಚರ್ಚೆಯು ಜ್ಞಾಪ್ತಿ (Motion) ಯಿಂದ ಪ್ರಾರಂಭವಾಗು ತ್ತಿತ್ತು. ಈ ಜ್ಞಾಪ್ತಿ, ಅಥವಾ ಸೂಚನೆಯನ್ನು ತರುವವನು ಅದನ್ನು ಪ್ರತಿಜ್ಞೆ ಎಂದರೆ ಗೊತ್ತುವಳಿ (Resolution) ಯ ರೂಪದಲ್ಲಿ ಸಭೆಯ ಮುಂದೆ ಇಡುತ್ತಿದ್ದನು. ಅದಕ್ಕೆ ಒಪ್ಪಿಗೆಯಿದ್ದವರು ಸುಮ್ಮ ನಿರತಕ್ಕದ್ದು. ಒಪ್ಪಿಗೆ ಇಲ್ಲದವರು ತಮಗೆ ಹೇಳತಕ್ಕದ್ದನ್ನು ಹೇಳು ವರು. ಕೆಲವೊಮ್ಮೆ ಈ ಜ್ಞಾಪ್ತಿ ಅಥವಾ ಸೂಚನೆಯನ್ನು ಮೂರು ಸಲ ಸಭೆಗೆ ತಿಳಿಸತಕ್ಕದ್ದು ಎಂದು ನಿಯಮವಿತ್ತು. ಮೂರೂ ಸಲ ಸಭೆಯವರು ಸುಮ್ಮನಿದ್ದರೆ ಅದು ಮಂಜೂರಾಯಿತೆಂದು ತಿಳಿಯಲ್ಪಡು ತ್ತಿತ್ತು. ಸಭೆಗೆ ಕನಿಷ್ಟ ಇಂತಿಷ್ಟೇ ಜನರು ಹಾಜರ ಇರತಕ್ಕದ್ದೆಂದು ನಿಯಮವಿತ್ತು. ಅದಕ್ಕೆ 'ವರ್ಗ'ವೆನ್ನುತ್ತಿದ್ದರು. ಅಷ್ಟು ಜನರು ಇಲ್ಲದಿದ್ದರೆ ಯಾವ ಕೆಲಸವೂ ನಡೆಯುತ್ತಿರಲಿಲ್ಲ. ಸಂಘದ ಕಾರ್ಯ ದರ್ಶಿಗೆ ಗಣಪೂರಕನೆಂದು ಹೆಸರು. ವರ್ಗಕ್ಕೋಸ್ಕರ ಅವಶ್ಯವಿದ್ದ ಸದಸ್ಯರನ್ನು ಕೂಡಿಸುವುದು ಆತನ ಕೆಲಸ. ಮತ ಅಥವಾ ಛಂದ ವನ್ನು ಕೊಡುವವರು ಅದನ್ನು ಸ್ವಸಂತೋಷದಿಂದ ಕೊಡತಕ್ಕದ್ದು.

‘ಬಹುತರ’ ಮತಗಳಂತೆ ನಿರ್ಣಯವಾಗುತ್ತಿತ್ತು. ಮತಗಳು ಅಥವಾ ಛಂದಗಳು ಶಲಾಕೆಗಳ ಮೂಲಕ ಎಂದರೆ ತಿಕೀಟುಗಳ ಮೂಲಕ ತೆಗೆದುಕೊಳ್ಳಲ್ಪಡುತ್ತಿದ್ದವು. ಮತ ತೆಗೆದುಕೊಳ್ಳುವದಕ್ಕೆ ಶಲಾಕಾ ಗ್ರಹಣವೆನ್ನುತ್ತಿದ್ದರು. ಮತ ತೆಗೆದುಕೊಳ್ಳುವ ಅಧಿಕಾರಿಗೆ ಶಲಾಕಾ ಗ್ರಾಹಕನೆಂದು ಹೆಸರು. ಗಣ ಅಥವಾ ಸಂಘದವರು ಆತನನ್ನು ನೇಮಿಸುತ್ತಿದ್ದರು. ಶಲಾಕೆಗಳಿಗೆ ಬೇರೆ ಬೇರೆ ಬಣ್ಣಗಳಿರುತ್ತಿದ್ದವು. ಆ ಅಧಿಕಾರಿಯು ಅವುಗಳ ಅರ್ಥವನ್ನು ಸದಸ್ಯರೆಲ್ಲರಿಗೂ ತಿಳಿಸಿ ಹೇಳುತ್ತಿದ್ದನು. ಉದ್ದುದ್ದ ಚರ್ಚೆಗಳು ಬೆಳೆಯಬಾರದೆಂದು ಒಮ್ಮೊಮ್ಮೆ ಉಪಮಂಡಳಗಳು ನೇಮಿಸಲ್ಪಡುತ್ತಿದ್ದವು. ಒಂದು ಸಲ ಯಾವುದೊಂದು ಪ್ರಶ್ನೆಯ ನಿರ್ಣಯವಾಯಿತೆಂದರೆ, ಪುನಃ ಅದೇ ಪ್ರಶ್ನೆಯನ್ನು ಎತ್ತಲಿಕ್ಕೆ ಯಾರಿಗೂ ಅಧಿಕಾರವಿದ್ದಿಲ್ಲ. ಸಂಘದ ನಿಯಮಗಳ ವಿರುದ್ಧ ಹೋದವನ ಸಂಬಂಧವಾಗಿ ನಿಂದ್ಯಾವ್ಯಂಜಕ ಗೊತ್ತುವಳಿಯು ಮಾಡಲ್ಪಡುತ್ತಿತ್ತು. ಸಭೆಯಲ್ಲಿ ನಡೆದ ಸಂಗತಿಗಳನ್ನು ಬರೆದುಕೊಳ್ಳುವದಕ್ಕೆ ಕಾರಕೂನರಿರುತ್ತಿದ್ದರು.

ಮೇಲ್ಕಾಣಿಸಿದ ಕಾರ್ಯಪದ್ಧತಿಯನ್ನು ಕ್ರಿಸ್ತಶಕಕ್ಕೆ ೬೦೦ ವರ್ಷಗಳ ಹಿಂದೆ ಇದ್ದ ಸಂಘಗಳಿಂದ ನಾವು ತೆಗೆದುಕೊಂಡಿರುವೆವು. ಇದರಿಂದ, ಆ ಕಾಲದಲ್ಲಿ ಈ ಕಾರ್ಯಪದ್ಧತಿಯು ಎಷ್ಟರಮಟ್ಟಿಗೆ ವಿಕಾಸಹೊಂದಿತ್ತೆಂಬುದು ಗೊತ್ತಾಗುವುದು. ಗೌತಮ ಬುದ್ಧನ ಕಾಲದ ಧಾರ್ಮಿಕ ಮತ್ತು ರಾಜಕೀಯ ಸಂಘಗಳ ಕಾರ್ಯಕ್ರಮದಲ್ಲಿ, ಈ ಜ್ಞಪ್ತಿ, ಪ್ರತಿಜ್ಞಾ, ಛಂದ, ವರ್ಗ, ಶಲಾಕಾ, ಬಹುತರ ಮುಂತಾದ ಶಬ್ದಗಳು ದೊರೆಯುತ್ತವೆ. ಆ ಕಾಲದಲ್ಲಿ ಇವೆಲ್ಲ ಶಬ್ದಗಳು ಜನತೆಯಲ್ಲಿ ಪೂರ್ಣವಾಗಿ ರೂಢವಾಗಿದ್ದವು.

**ಮತಾಧಿಕಾರ**:— ಕೆಲವು ರಾಜ್ಯಗಳಲ್ಲಿ ಪ್ರತಿಯೊಂದೊಂದು ಕುಟುಂಬಕ್ಕೆ ಮತಾಧಿಕಾರವಿತ್ತು. ಆ ಕುಟುಂಬದ ಯಾವುದೇ ಮನುಷ್ಯನಿಗೆ ಸೇನಾಪತಿ, ಗ್ರಾಮಣಿ, ಅಥವಾ ಪೂಗಗ್ರಾಮಣಿಯಾಗುವ ಅಧಿಕಾರವಿತ್ತು. ಇವೆಲ್ಲ ಅಧಿಕಾರಿಗಳು ಪ್ರಜೆಗಳಿಂದ ಆರಿಸಲ್ಪಡತಕ್ಕ ಅಧಿಕಾರಿಗಳು. ಆದರೆ, ಗಣರಾಜ್ಯಗಳಲ್ಲಿ ಪ್ರತಿಯೊಬ್ಬ ವ್ಯಕ್ತಿಗೆ

ಮತಾಧಿಕಾರವುಳ್ಳ ರಾಜ್ಯಗಳೇ ಬಹಳ. ಅರಸನು ಕೂಡ ಜನರಿಂದ ಆರಿಸಲ್ಪಡತಕ್ಕವನೇ.

**ಇವುಗಳ ಇತಿಹಾಸ**:– ಈ ಬಗೆಯಾಗಿ ನಾವು ಈ ಗಣರಾಜ್ಯ ಪದ್ಧತಿಗಳನ್ನು ಕುರಿತು ವಿವೇಚಿಸಿದೆವು. ಇನ್ನು ಇವುಗಳ ಇತಿಹಾಸ ವನ್ನು ಕೊಟ್ಟು ಈ ಮಹತ್ವದ ಪ್ರಕರಣವನ್ನು ಮುಗಿಸುತ್ತೇವೆ.

ಐತರೇಯ ಬ್ರಾಹ್ಮಣ ಕಾಲದಿಂದ ಎಂದರೆ ಕನಿಷ್ಠ ಕ್ರಿಸ್ತಶ ಕಕ್ಕೆ ೪೫೦೦ ವರ್ಷಗಳ ಹಿಂದಿನಿಂದ ಈ ಗಣರಾಜ್ಯಪದ್ಧತಿಗಳು ಅಸ್ತಿ ತ್ವದಲ್ಲಿದ್ದವು. ಹಿಂದುಸ್ಥಾನದ ಉತ್ತರ, ಪಶ್ಚಿಮ ಮತ್ತು ದಕ್ಷಿಣ ಪ್ರದೇಶಗಳಲ್ಲಿ ಈ ಗಣರಾಜ್ಯಗಳಿದ್ದವೆಂದೂ ಮಧ್ಯದೇಶದಲ್ಲಿ ಎಂದರೆ ದಿಲ್ಲಿಯಿಂದ ಅಲ್ಲಾಹಾಬಾದದವರೆಗೆ ಮಾತ್ರವೇ ಅರಸೊತ್ತಿಗೆಗಳಿದ್ದ ವೆಂದೂ ಐತರೇಯ ಬ್ರಾಹ್ಮಣದಲ್ಲಿ ಹೇಳಿದೆ. ಪೂರ್ವಪ್ರದೇಶದಲ್ಲಿ ಮಗಧದ ದೊಡ್ಡ ಸಾಮ್ರಾಜ್ಯವಿತ್ತು. ಬುದ್ಧನ ಕಾಲಕ್ಕೂ ಬಹುಶಃ ಇದೇ ಪ್ರಕಾರದ ಸ್ಥಿತಿಯಿತ್ತೆಂಬುದು ಪಾಲೀವಾಙ್ಮಯದಿಂದ ಗೊತ್ತಾ ಗುತ್ತದೆ. ಆಗ ಗಣರಾಜ್ಯಗಳೂ ಇದ್ದವು, ರಾಜಾಧೀನರಾಜ್ಯ ಗಳೂ ಇದ್ದವು. ಆದರೆ ಗಣರಾಜ್ಯಗಳೇ ಬಹಳ. ಮುಂದೆ ಸಿಕಂ ದರಬಾದಶಹನು ಹಿಂದುಸ್ಥಾನದ ಮೇಲೆ ದೌಡುಮಾಡಲಿಕ್ಕೆ ಬಂದಾಗ (ಕ್ರಿ. ಪೂ. ೪ನೆಯ ಶತಮಾನ) ಕೂಡ ಉತ್ತರ, ದಕ್ಷಿಣ ಮತ್ತು ಪಶ್ಚಿಮ ಪ್ರದೇಶಗಳಲ್ಲಿ ಈ ತರಹದ ಪ್ರಜಾಸತ್ತಾತ್ಮಕ ರಾಜ್ಯಪದ್ಧತಿ ಗಳೇ ಇದ್ದವು. ಆದರೆ, ಮುಂದೆ, ಚಂದ್ರಗುಪ್ತನು ಬಲಾಢ್ಯವಾದ ಸಾಮ್ರಾಜ್ಯವನ್ನು ಸ್ಥಾಪಿಸಿದಾಗ ಮಾತ್ರ, ಈ ತರಹದ ಪ್ರಜಾ ಸತ್ತಾಕ ರಾಜ್ಯಪದ್ಧತಿಗಳು ಒಂದೊಂದೇ ಉರುಳತೊಡಗಿದವು. ಈ ತರಹದ ರಾಜ್ಯಗಳನ್ನು ಸಮೂಲವಾಗಿ ನಿರ್ಮೂಲವಾಡುವದು ಚಂದ್ರ ಗುಪ್ತನ ರಾಜನೀತಿಯ ಮುಖ್ಯ ಧೋರಣವಾಗಿತ್ತು. ಆದುದರಿಂದ ಈ ಚಿಕ್ಕ ಚಿಕ್ಕ ಪ್ರಜಾಸತ್ತಾಕ ರಾಜ್ಯಪದ್ಧತಿಗಳು ನುಂಗಲ್ಪಟ್ಟವು. ಬಲಿಷ್ಠವಾದ ಗಣರಾಜ್ಯಗಳು ಹಲಕೆಲವು ಮಾತ್ರವೇ ಉಳಿದವು. ಇದು ಮೌರ್ಯರ ಕಾಲದ ಸ್ಥಿತಿಯಾಯಿತು. ಶುಂಗರ ಕಾಲದಲ್ಲಿಯೂ ಬಹುತರವಾಗಿ ಇದೇ ತರಹದ ಸ್ಥಿತಿಯಿತ್ತು. ಆದರೆ, ಮುಂದೆ ಕ್ಷತ್ರ

ಪರ ಕಾಲದಲ್ಲಿ (ಮಥುರೆಯಲ್ಲಿ) ಮಾತ್ರ ಈ ಗಣರಾಜ್ಯಗಳ ಗೋಳು ಘನತರವಾಯಿತು. ಕ್ಷತ್ರಪರು ಈ ಗಣರಾಜ್ಯಗಳನ್ನು ನಿರ್ನಾಮ ಮಾಡುವುದಕ್ಕೆ ಪಣತೊಟ್ಟರು. ಆಗ, ಅವರ ಕ್ರೂರತನವನ್ನು ಸಹಿಸಲಾರದೆ, ಅನೇಕ ಗಣರಾಜ್ಯಗಳ ಜನರು ತಮ್ಮ ದೇಶಕೋಶ ಗಳನ್ನೆಲ್ಲ ತೊರೆದು ದಕ್ಷಿಣಕ್ಕೆ ಸಾಗಿ ರಜಪೂತಸ್ಥಾನದಲ್ಲಿ ವಾಸವಾಗಿ ನಿಂತುಕೊಂಡರು! ಅವರಿಗೆ ತಮ್ಮ ಸ್ವಾತಂತ್ರ್ಯದ ಬಗ್ಗೆ ಅಷ್ಟು ಪ್ರೇಮ! ತಮ್ಮ ರಾಜ್ಯಪದ್ಧತಿಯ ಬಗ್ಗೆ ಅಷ್ಟೊಂದು ಅಭಿಮಾನ! ಪಂಜಾಬದಂಥ ಫಲದ್ರೂಪವಾದ ಪ್ರದೇಶವನ್ನು ಬಿಟ್ಟುಕೊಟ್ಟು ರಜ ಪೂತಸ್ಥಾನದಂಥ ಮರುಭೂಮಿಗೆ ಅವರು ತೆರಳಿದ್ದು ಅವರ ಸ್ವಾತಂತ್ರ್ಯ ಪ್ರೇಮವನ್ನು ಚೆನ್ನಾಗಿ ವ್ಯಕ್ತಪಡಿಸುತ್ತದೆ. ಅವರು ತಮ್ಮ ಪ್ರೀತಿಯ ದೇಶವನ್ನಾದರೂ ತೊರೆದಾರು, ಆದರೆ ಸ್ವಾತಂತ್ರ್ಯವನ್ನು ಮಾತ್ರ ಎಂದೂ ಕಳೆದುಕೊಳ್ಳಲಿಕ್ಕಿಲ್ಲ! ವನವಾಸದಲ್ಲಿದ್ದರೂ ಸ್ವತಂತ್ರರಾಗಿ ಇರುವುದೇ ಅವರಿಗೆ ಪ್ರಿಯವಾದ ಮಾತು. ಸ್ವಗೃಹ ಸ್ವದೇಶಕ್ಕಿಂ ತಲೂ ಸ್ವಾತಂತ್ರ್ಯವು ಹೆಚ್ಚಿನದು. ಶಿಬಿ, ತ್ರಿಗರ್ತ, ಮಾಲವ ಮುಂತಾದ ಈ ಗಣರಾಜ್ಯಗಳು ಪಂಜಾಬದಿಂದ ಹೊರಬಿದ್ದು ಸಿಂಧ ಮತ್ತು ವಿಂಧ್ಯಪರ್ವತದ ಮಧ್ಯದಲ್ಲಿರುವ ಪ್ರದೇಶವನ್ನು ಆಕ್ರಮಿಸಿ ಅಲ್ಲಿ ಇರಹತ್ತಿದವು. ಕ್ರಿ. ಪೂರ್ವದ ೧೫೦ ವರ್ಷದಿಂದ ಕ್ರಿ. ಶ. ನಂತರದ ೩೫೦ ವರ್ಷಗಳ ವರೆಗೆ ಈ ತರಹದ ಗಣರಾಜ್ಯಗಳು ಅಲ್ಲಿ ಭರಭರಾಟೆಯಲ್ಲಿ ಇದ್ದವು.

ಆದರೆ, ಅಲ್ಲಿಯೂ ಈ ಗಣರಾಜ್ಯಗಳಿಗೆ ಭಯಂಕರವಾದ ವಿಪತ್ತು ಸಂಭವಿಸಿತು. ಆಗ ಗುಪ್ತ ಸಾಮ್ರಾಜ್ಯವು ಘನತೆಗೇರಿತ್ತು. ಅದು ಈ ಗಣರಾಜ್ಯಗಳಿಗೆ ಒಳ್ಳೇ ಕೊಡಲಿಯ ಪೆಟ್ಟನ್ನು ಕೊಟ್ಟಿತು. ವಸ್ತುತಃ ನೋಡಿದರೆ, ಗುಪ್ತರಾಜ್ಯದ ಉದಯಕ್ಕೆ ಲಛವೀ ಎಂಬು ದೊಂದು ಗಣರಾಜ್ಯವೇ ಕಾರಣವಾಯಿತು. ಮುಂದೆ ಗುಪ್ತ ಸಾಮ್ರಾ ಜ್ಯವು ಕೃತಘ್ನವಾಗಿ ಈ ಗಣರಾಜ್ಯಗಳನ್ನು ನುಂಗುವುದಕ್ಕೂ ಆ ಗುಪ್ತ ಸಾಮ್ರಾಜ್ಯವೇ ಮುಖ್ಯ ಕಾರಣವಾಯಿತು. ಮುಂದೆ ಆ ಗುಪ್ತ ಸಾಮ್ರಾಜ್ಯವು ಲುಪ್ತವಾಗುವುದಕ್ಕೂ ಪುಷ್ಯಮಿತ್ರವೆಂಬುದೊಂದು

ಗಣರಾಜ್ಯವೇ ಕಾರಣ. ಆದರೆ ಕೊನೆಗೆ ಈ ಪುಷ್ಯಮಿತ್ರವೆಂಬ ಗಣ ರಾಜ್ಯವೂ ೫ನೆಯ ಶತಮಾನದಲ್ಲಿ ಅಸ್ತವಾಯಿತು.

ಹೀಗೆ ೫ನೆಯ ಶತಮಾನದ ಕೊನೆಗೆ, ಹಿಂದುಸ್ಥಾನದಲ್ಲಿಯ ಗಣರಾಜ್ಯಗಳೆಲ್ಲವೂ ನಷ್ಟವಾಗಿ ಹೋದವು. ಋಗ್ವೇದದ ಮೊದಲ ನೆಯ ಮಂತ್ರವು ಉಚ್ಚಾರವಾದಾಗಿನಿಂದ ಒಂದೇ ಸಮನೆ ಅಸ್ತಿತ್ವ ದಲ್ಲಿದ್ದ ಆ ರಾಷ್ಟ್ರೀಯ ಭಾವನೆಯು ಆಗಿನಿಂದ ಪೂರ್ಣವಾಗಿ ನಷ್ಟ ವಾಗಿ ಹೋಯಿತು. ಹಿಂದುಸ್ಥಾನದ ಮುಂದಿನ ಇತಿಹಾಸವೆಂದರೆ ಸಾಮ್ರಾಜ್ಯಗಳ ಇತಿಹಾಸ; ಮಹಾಪುರುಷರ ಇತಿಹಾಸ. ಆದರೆ ಗಣ ರಾಜ್ಯಗಳ ಇತಿಹಾಸವಲ್ಲ, ಜನತೆಯ ಇತಿಹಾಸವಲ್ಲ. ಜನತೆಯಲ್ಲಿಯ ಸ್ವಾತಂತ್ರ್ಯದ ಉಸಿರು ನಿಂತುಹೋಯಿತು. ಹೀಗಾಗುವುದಕ್ಕೆ ಯಾವ ಕಾರಣಗಳುಂಟಾದವೆಂಬುದೂ ಇತಿಹಾಸದಲ್ಲಿಯ ಒಂದು ದೊಡ್ಡ ಸಮಸ್ಯೆ.

---

## ೭ನೆಯ ಪ್ರಕರಣ

# ರಾಜಾಧಿಪತ್ಯ

ಹೋದ ಪ್ರಕರಣದಲ್ಲಿ, ನಾವು ಈ ದೇಶದ ಪ್ರಜಾಸತ್ತಾತ್ಮಕ ರಾಜ್ಯಪದ್ಧತಿಗಳನ್ನು ಕುರಿತು ಹೇಳಿದೆವು. ಆದರೆ, ನಮ್ಮ ದೇಶ ದಲ್ಲಿ ಪ್ರಾಚೀನ ಕಾಲಕ್ಕೆ ಪ್ರಜಾಸತ್ತಾತ್ಮಕ ಸಂಸ್ಥೆಗಳೇ ವಿಶೇಷವಾ ಗಿದ್ದರೂ ರಾಜನಿಂದ ಆಳಲ್ಪಟ್ಟ ರಾಜ್ಯಗಳೂ ಕೆಲವು ಇದ್ದೇ ಇದ್ದವು. ರಾಜನನ್ನು ಆರಿಸುವ ಪದ್ಧತಿಯು ಹೇಗೆ ರೂಢವಾಯಿತು, ಮುಂದೆ ರಾಜಾಧಿಪತ್ಯವು ಹೇಗೆ ವಂಶಪರಂಪರಾಗತವಾಯಿತು- ಇವೇ ಮುಂತಾದ ಸಂಗತಿಗಳನ್ನು ಕುರಿತು ಈ ಪ್ರಕರಣದಲ್ಲಿ ವಿವೇಚಿ ಸುವೆವು.

ರಾಜ್ಯವನ್ನಾಳುವುದಕ್ಕೆ ಒಬ್ಬ ರಾಜನಿರಬೇಕೆಂಬ ಕಲ್ಪನೆಯ ಮೂಲವು ಪಿತೃಪ್ರಧಾನ ಕುಟುಂಬ ವ್ಯವಸ್ಥೆಯಲ್ಲಿ ಇದೆ. ಹಿಂದೂ

ಕುಟುಂಬಕ್ಕೆ ತಂದೆಯೇ ರಾಜನು. ಕುಟುಂಬವನ್ನು ಸಂರಕ್ಷಿಸುವ ಭಾರವು ಆತನದು. ಕುಟುಂಬದೊಳಗಿನ ಎಲ್ಲ ಜನರ ಮೇಲೆ ಆತನ ಅಧಿಕಾರ. ಮುಂದೆ ಕುಟುಂಬಗಳು ದೊಡ್ಡವಾದಂತೆ ಆತನ ಜವಾಬದಾರಿಯೂ ಹೆಚ್ಚಾಯಿತು. ಅನೇಕ ಕುಟುಂಬಗಳು ಕೂಡಿ ಇರಲಾರಂಭಿಸಿದಾಗ ಅವುಗಳನ್ನೆಲ್ಲ ಸಂರಕ್ಷಿಸುವುದಕ್ಕೆ ಒಬ್ಬ ವೀರ ಪುರುಷನು ಬೇಕಾದನು. ಆತನೇ ಮುಂದೆ ಬರಬರುತ್ತ ಅರಸನಾದನು.

'ರಾಜನ್' ಎಂಬ ಶಬ್ದವು 'ರಾಟ್' ಇದರಿಂದ ಹುಟ್ಟಿದೆ. ಆದಕಾರಣ ಅದರ ಮೂಲ ಶಬ್ದಾರ್ಥವು ಆಳುವವನು ಎಂದು ಆಗುತ್ತದೆ. ಲ್ಯಾಟಿನ್ ಭಾಷೆಯಲ್ಲಿಯ ರೆಕ್ಸ (Rex) ಶಬ್ದಕ್ಕೆ ಅದು ಸಮಾನಾರ್ಥವುಳ್ಳದ್ದಾಗಿದೆ. ಆದರೆ ಹಿಂದೂ ಜನರು ಆ ಶಬ್ದಕ್ಕೆ ವ್ಯಾಪಕವಾದ ತಾತ್ವಿಕ ಅರ್ಥವನ್ನು ಕೊಟ್ಟಿರುವರು. ಅದಾವುದೆಂದರೆ ಪ್ರಜೆಗಳನ್ನು ರಂಜಿಸುವವನು ಅಂದರೆ ಆನಂದಗೊಳಿಸುವವನು ರಾಜನು. ಈ ಅರ್ಥದಲ್ಲಿ ರಾಜನ ಮುಖ್ಯ ಕರ್ತವ್ಯವಾವುದೆಂಬುದೂ ಅಡಕವಾಗಿದೆ. ಮೊದಲು, ರಾಜನೆಂದರೆ ಒಬ್ಬ ವೀರ ಪುರುಷನೆಂದು ಹೇಳಿದೆಯಷ್ಟೆ. ಆತನನ್ನು ಆರಿಸುವ ಅಧಿಕಾರವು ಜನರದು. ಆದರೆ ಆತನು ಮುಂದೆ ವಂಶಪರಂಪರಾಗತನಾಗುವುದಕ್ಕೆ ಮುಂಚೆ ನಮ್ಮ ದೇಶದಲ್ಲಿ ಒಂದು ವಿಲಕ್ಷಣವಾದ ಪದ್ಧತಿಯು ಕಂಡು ಬರುತ್ತದೆಂದು ಡಾ. ಶ್ಯಾಮಶಾಸ್ತ್ರಿಗಳ ಅಭಿಪ್ರಾಯ. ಈ ಪದ್ಧತಿಯಲ್ಲಿಯೂ ಅರಸನು ಆರಿಸಲ್ಪಡುತ್ತಾನೆ. ಆದರೆ ಆತನು ಒಂದು ವಿಶಿಷ್ಟವಾದ ಬ್ರಹ್ಮಚಾರಿಗಳ ವರ್ಗದೊಳಗಿಂದ ಆರಿಸಲ್ಪಡುತ್ತಿದ್ದನು. ಈ ಬ್ರಹ್ಮಚಾರಿಗಳು ಪುರೋಹಿತರಿಂದ ರಾಣಿಯರ ವರ್ಗದಲ್ಲಿ ಉತ್ಪನ್ನರಾದವರು. ಈ ರಾಣಿಯರಿಗೆ ಪ್ರಾಚೀನ ಗ್ರಂಥಗಳಲ್ಲಿ 'ಗಾ' ಅಂದರೆ ಆಕಳುಗಳು ಎಂದು ಹೆಸರು.

ಆರ್ಯರು ಹಿಂದುಸ್ಥಾನವನ್ನು ಪ್ರವೇಶಿಸಿ ಅನಾರ್ಯರನ್ನು ಗೆದ್ದು ಇಲ್ಲಿ ತಳವೂರಿದ ಬಳಿಕ, ಮತ್ತು ಅನಾರ್ಯರಿಗೆ ಕೆಲವು ಹಕ್ಕುಗಳನ್ನು ಕೊಟ್ಟು ಅವರನ್ನು ತಮ್ಮ ಸಮಾಜದಲ್ಲಿ ಕೂಡಿಸಿಕೊಂಡ ಬಳಿಕ, ಅವರು ತಮ್ಮ ಸಮಾಜಕ್ಕೆ ಯೋಗ್ಯ ಅರಸನು

ಯಾರೆಂಬುದನ್ನು ಯೋಚಿಸಿದಾಗ ಅವರಿಗೆ ಮೊತ್ತಮೊದಲು ಯಾವುದೂ ತರಹದ ಸಂಸಾರಲಂಪಟವಿಲ್ಲದ ಈ ಬ್ರಹ್ಮಚಾರಿಗಳಾದ ಅರಸರ ಕಲ್ಪನೆಯು ಹೊಳೆಯಿತು. ರಾಣಿಯರ ವರ್ಗವೆಂಬುದೊಂದು ಪ್ರತ್ಯೇಕ ವರ್ಗ. ಪುರೋಹಿತರು ಅವರೊಡನೆ ಸಂಬಂಧ ಬೆಳಿಸಿ ಅವರಿಂದ ಹುಟ್ಟಿದ ಪುತ್ರರೇ ಈ ರಾಜನ್ಯರು, ಅಥವಾ ಕ್ಷತ್ರಿಯರು. ಇವರು ಅರಸರಾಗುವುದರಿಂದ ಪ್ರಜೆಗಳಿಗೆ ಹಿತವಾಗುತ್ತಿತ್ತೆಂದು ಆಗಿನ ಕಲ್ಪನೆ. ಏಕೆಂದರೆ, ಈ ರಾಜನ್ಯರಿಗೆ ಯಾವ ತರಹದ ಪ್ರಾಪಂಚಿಕ ಬಂಧನವಿಲ್ಲದ್ದರಿಂದ ಪ್ರಜೆಗಳನ್ನು ನಿಃಪಕ್ಷಪಾತದಿಂದಾಳುವುದಕ್ಕೆ ಅವರು ಹೆಚ್ಚು ಯೋಗ್ಯರಾಗಿದ್ದರು. ಆದರೆ ಮುಂದೆ, ಈ ರಾಜನ್ಯರಿಗೂ ಲಗ್ನ ಮಾಡಿಕೊಳ್ಳಬೇಕೆಂಬ ಹವ್ಯಾಸ ಹುಟ್ಟಿತು. ಮತ್ತು ಹಾಗೆ ಅವರು ಲಗ್ನ ಮಾಡಿಕೊಳ್ಳಲಾರಂಭಿಸಿದುದಲ್ಲದೆ, ತಮ್ಮ ಮಕ್ಕಳಿಗೇ ತಾವು ಆಳುತ್ತಿರುವ ರಾಜ್ಯವು ದೊರೆಯಬೇಕೆಂದು ಬಡೆದಾಡಲಾರಂಭಿಸಿದರು. ಆಗ ಅವರಿಗೂ ಪುರೋಹಿತರಿಗೂ ಜಗಳಗಳಾದವು. ಕೆಲವು ರಾಜ್ಯಗಳಲ್ಲಿ ಪುರೋಹಿತರು ಸೋತರು. ಮತ್ತು ಆಗ ಅಲ್ಲಿಯ ರಾಜ್ಯಗಳು ವಂಶಪರಂಪರಾಗತ ರಾಜ್ಯಗಳಾದವು. ಅಲ್ಲಿಯವರೆಗೆ ಆರ್ಯರೊಳಗಿನ ಪುರೋಹಿತ ವರ್ಗವು ರಾಣಿ ವರ್ಗದಲ್ಲಿ ಕ್ಷತ್ರಿಯರನ್ನು ಹುಟ್ಟಿಸಿ ಅವರಿಗೆ ಆಬ್ರಹ್ಮಚಾರಿಗಳಾಗಿ ಇಟ್ಟು ಅವರಿಂದ ರಾಜ್ಯಗಳನ್ನು ಆಳಿಸಿಕೊಳ್ಳುತ್ತಿದ್ದರು. ಆ ರಾಜನ್ಯರಿಗೆ ಪುರೋಹಿತ ವರ್ಗದ ಮೇಲೆ ಯಾವ ಅಧಿಕಾರವೂ ಇದ್ದಿಲ್ಲ. ಆದರೆ, ಮೇಲೆ ಹೇಳಿದಂತೆ ಕ್ಷತ್ರಿಯರು ಪ್ರಬಲರಾಗಿ ಪುರೋಹಿತ ವರ್ಗವನ್ನು ಮುರಿಬಡೆದು ವಂಶಪರಂಪರಾಗತ ಅರಸೊತ್ತಿಗೆಯನ್ನು ಸ್ಥಾಪಿಸಿದರು. ಈ ತರಹದ ಪದ್ಧತಿಯು ಮತ್ತಾವ ದೇಶದಲ್ಲಿಯೂ ಇರಲಿಲ್ಲ.

ರಾಜನ ಕಲ್ಪನೆಯ ವಿಷಯವಾಗಿ ನಮ್ಮಲ್ಲಿ ಎರಡು ತರಹದ ಸಿದ್ಧಾಂತಗಳಿವೆ. (೧) ವೈದಿಕ ಕಲ್ಪನೆ– ಇದರ ಮೇರೆಗೆ ದೇವಾಸುರರೊಳಗೆ ಯುದ್ಧ ಮಾಡುವ ಪ್ರಸಂಗ ಒದಗಿದಾಗ ದೇವತೆಗಳಿಗೆ ಅರಸನ ಅವಶ್ಯಕತೆಯುಂಟಾಯಿತು. ಆಗ ಅವರು ತಮ್ಮೊಳಗಿನ ಒಬ್ಬ ವೀರಪುರುಷನನ್ನು ಆರಿಸಿ ಆತನಿಗೆ 'ರಾಜ' ನೆಂದು

ಕರೆದರು. ಆದರೆ, ಆತನು ವಂಶಪರಂಪರಾಗತ ಅರಸನಲ್ಲ. ಅರಸನನ್ನು ಜನರು ಯಾವಾಗಲೂ ಆರಿಸಬೇಕಾಗುತ್ತಿತ್ತು. (೨) ಶಾಸ್ತ್ರೀಯ ಕಲ್ಪನೆ. ಮೊದಲು ಜನರು ಅರಸನನ್ನು ಕೆಲವು ಕರಾರುಗಳ ಮೇಲೆ ಆರಿಸಿ ಆತನ ಕೈಯಲ್ಲಿ ಕೆಲವು ಅಧಿಕಾರಗಳನ್ನು ಕೊಟ್ಟರು. ಮತ್ತು ಆ ಕರಾರುಗಳನ್ನು ಆತನು ಪಾಲಿಸಲೇಬೇಕಾಗುತ್ತಿತ್ತು. ಎಂದರೆ, ಜನರಿಗೂ ಅರಸನಿಗೂ ಕರಾರುಗಳಾಗಿ ಅರಸೊತ್ತಿಗೆಯು ಉದ್ಭವಿಸಿತು. ಈ ಶಾಸ್ತ್ರೀಯ ಕಲ್ಪನೆಗೆ ಅನುಸಾರವಾಗಿ, ರಾಜನಿಗೆ ಅಭಿಷೇಕವನ್ನು ಮಾಡುವಾಗ ಆ ಕರಾರುಗಳು ಉಚ್ಚರಿಸಲ್ಪಡುತ್ತಿದ್ದವು. ವೈದಿಕ ಋಚೆಗಳಲ್ಲಿಯೂ ವಿಧಿಗಳಲ್ಲಿಯೂ ಅಭಿಷೇಕ ಮಂತ್ರಗಳಲ್ಲಿಯೂ ಮತ್ತು ಪಟ್ಟವನ್ನೇರುವಾಗ ಅರಸನು ತೆಗೆದುಕೊಳ್ಳಬೇಕಾದ ಪ್ರತಿಜ್ಞೆಯಲ್ಲಿಯೂ ಆಗ ಅರಸನ ಅಧಿಕಾರವು ಎಷ್ಟರ ಮಟ್ಟಿಗೆ ಇತ್ತೆಂಬುದನ್ನು ಕಾಣಬಹುದು. ಆಗ ಸಮಿತಿಯಲ್ಲಿ ಅರಸನು ಯಾವಾಗಲೂ ಜನರಿಂದ ಆರಿಸಲ್ಪಡುತ್ತಿದ್ದನು.§ ಮತ್ತು ಆತನಿಗೆ ಆತನು ಮಾಡತಕ್ಕ ಕರ್ತವ್ಯಗಳ ನೆನಪು ಕೊಡಲ್ಪಡುತ್ತಿತ್ತು. ಆತನು ಆಜೀವಮಾನ ಆರಿಸಲ್ಪಡುತ್ತಿದ್ದನು. ಕೆಲವು ಸಲ, ಆತನನ್ನು ಜನರು ತಳ್ಳುತ್ತಿದ್ದರು. ಅಥವಾ ಹದ್ದುಪಾರು ಮಾಡುತ್ತಿದ್ದರು, ಮತ್ತು ಹದ್ದುಪಾರು ಮಾಡಿದವನನ್ನು ಪುನಃ ಆರಿಸಿಕೊಳ್ಳುವ ಅಧಿಕಾರವೂ ಅವರಿಗೆ ಇತ್ತು.‡ ಆತನು ಜನರಿಂದ ಕರಗಳನ್ನು ವಸೂಲ ಮಾಡತಕ್ಕದ್ದು.* ಮತ್ತು ರಾಜ್ಯವನ್ನು ನಡಿಸತಕ್ಕದ್ದು. ಅರಸನ ಹೊರತಾಗಿ ಗ್ರಾಮಣಿ, ಸೇನಾಪತಿ ಮುಂತಾದ ಆರು ಜನ ಅಧಿಕಾರಿಗಳಿರುತ್ತಿದ್ದರು. ಅವರೂ ಸಮಿತಿಯೂ ಕೂಡಿ ಅರಸನನ್ನು ಆರಿಸುತ್ತಿದ್ದರು. ಅವರಿಗೆ 'ರಾಜಕೃತ್' ಎಂದು ಕರೆಯುತ್ತಿದ್ದರು. ಸಾರಾಂಶ, ರಾಜನು ಜನತೆಯ ಆಳು ಎಂಬ ಕಲ್ಪನೆಯು ಆಗಿನ ಕಾಲದ್ದು. ಆತನ ಮೇಲೆ ಸಮಿತಿಯ ಅಧಿಕಾರವು.

---

§ ಅಥರ್ವವೇದ ೬-೮೭-೮೮. ಋಗ್ವೇದ ೧೦-೧೭೩.

‡ ಅಥರ್ವವೇದ ೩-೩ ೫

* ಋಗ್ವೇದ ೧೦-೧೭೩-೬

ಧರ್ಮ (Law) ವನ್ನು ಪರಿಪಾಲಿಸುವುದು ಅರಸನ ಮುಖ್ಯ ಕರ್ತವ್ಯ. ರಾಜ್ಯದ ಅಭ್ಯುದಯವನ್ನು ಮಾಡುವುದು ಆತನ ಕರ್ತವ್ಯ. ಸಾರಾಂಶ, ನಮ್ಮ ದೇಶದಲ್ಲಿಯ ರಾಜನ ಮೂಲ ಕಲ್ಪನೆಯು ಆತನು ಜನತೆಯ ಒಬ್ಬ ಆಳು ಎಂದೇ ಇರುತ್ತದೆ. ಅರಸನು ವಿಷ್ಣುವಿನ ಅಂಶನು ಎಂಬುದೂ ಒಂದು ಅರ್ಥದಲ್ಲಿ ನಿಜವಿರುತ್ತದೆ. ಅದಾವುದೆಂದರೆ, ಆತನೂ ಒಬ್ಬ ಮಹಾವಿಭೂತಿಯು. ವಿಭೂತಿಗಳೆಲ್ಲ ದೇವತಾಂಶವಿದ್ದೇ ಇರುತ್ತದೆ. **ಯದ್ಯದ್ವಿಭೂತಿಮತ್ಸತ್ವಂ ಶ್ರೀಮದೂರ್ಜಿತಮೇವ ವಾ। ತತ್ತದೇವಾವಗಚ್ಛತ್ವಂ ಮಮ ತೇಜೋಂಶಸಂಭವಂ॥** ಗೀತಾ ೧೦–೪೧ ಎಂದು ಗೀತೆಯಲ್ಲಿ ಹೇಳಿಲ್ಲವೆ. ಇದರಿಂದ, ಅರಸನೂ ಒಬ್ಬ ಮಹಾವಿಭೂತಿಯೆಂದಿಷ್ಟೆ ಅರ್ಥವಾಗುತ್ತದಲ್ಲದೆ ಆತನು ಅನಿಯಂತ್ರಿತನಾದ ಅಧಿಕಾರಿಯೆಂದು ಅರ್ಥವಾಗುವುದಿಲ್ಲ. ಆತನು ದೇವಾಂಶಸಂಭೂತನೆಂಬ ಕಲ್ಪನೆಯು ಮುಂಚೆ ಇದ್ದಿಲ್ಲ. ಅದು ಇತ್ತೀಚಿನದು. ಅರಸೊತ್ತಿಗೆಯು ವಂಶಪರಂಪರಾಗತವಾದುದು ಇದ್ದಿಲ್ಲ. ಜನರ ಆರಸುವಿಕೆಯ ಮೇಲೆ ಅದು ಅವಲಂಬಿಸಿತ್ತು. ರಾಜ್ಯದ ಮಿಕ್ಕ ಅಧಿಕಾರಿಗಳಂತೆ ಆತನೂ ಒಬ್ಬ ಅಧಿಕಾರಿ ಮಾತ್ರ. ಧರ್ಮದಿಂದ ಅರಸನು ಬದ್ಧನು, ಅನಿಯಂತ್ರಿತ ಅಧಿಕಾರವುಳ್ಳವನಲ್ಲ. ಇದು ವೈದಿಕ ಕಾಲದ ಅರಸನ ವಿಷಯಕ ಕಲ್ಪನೆಯು. ಅರಸನು ಯಾವಾಗಲೂ ಸಮಿತಿ (National Assembly) ಗೆ ಅಧೀನನು. ಅಭಿಷೇಕದ ಕಾಲದಲ್ಲಿ ತನ್ನ ೧೧ ರತ್ನಿಗಳಿಗೆ ರತ್ನಹವಿಯನ್ನು ಕೊಡಬೇಕಾಗುತ್ತಿತ್ತು. ಆ ೧೧ ರತ್ನಿಗಳು ಯಾರೆಂದರೆ (೧) ಸೇನಾಪತಿ (೨) ಪುರೋಹಿತ (೩) ಮಹಿಷಿ (೪) ಸೂತ (೫) ಗ್ರಾಮಣಿ (೬) ಕ್ಷತ್ರಿ (Chamberlain) (೭) ಸಂಗೃಹೀತಾ (Master of the treasury) (೮) ಭಾಗದುಘ್ (Collector of Revenue) (೯) ಅಕ್ಷವಾಪ್ (Accountant General) (೧೦) ಗೋವಿಕರ್ತಾ (Master of forests) (೧೧) ಪಾಲಾಗಲ (Courier in charge of chariots).

ಆರಿಸಲ್ಪಟ್ಟ ಅರಸನು. ಮುಖ್ಯ ರತ್ನಿಯು. ಈ ರತ್ನಿಗಳು ಅರಸೊತ್ತಿಗೆಯು ಉದಯವಾಗುವ ಮುಂಚಿನಿಂದಲೂ ಇದ್ದವರು. ಮೊದಲು ಅವರು ಸಮಿತಿಯ ಸಭಾಸದರು. ಆದರೆ, ಅರಸನು ಆರಿಸಲ್ಪಟ್ಟ ವ್ಯಕ್ತಿಯೆಂಬ ಕಲ್ಪನೆಯು ಬರಬರುತ್ತ ಲುಪ್ತವಾಯಿತು. ಆದರೆ ಮುಂದೆ, ಆ ಕಲ್ಪನೆಯು ಲುಪ್ತವಾಗಿ, ಅರಸೊತ್ತಿಗೆಯು ವಂಶಪರಂಪರಾಗತವಾದ ಬಳಿಕ ಕೂಡ, ಆತನ ಅಭಿಷೇಕದ ಕಾಲಕ್ಕೆ ಆ ಹಿಂದಿನ ಮಂತ್ರಗಳೇ ಉಚ್ಚರಿಸಲ್ಪಡುತ್ತ; ಬಂದಿವೆ. ಬ್ರಾಹ್ಮಣ ಗ್ರಂಥಗಳಿಗೂ ವಂಶಪರಂಪರಾಗತ ಅರಸನ ಗೊತ್ತೇ ಇಲ್ಲ. ಅರಸನು ತೆಗೆದುಕೊಳ್ಳಬೇಕಾದ ಪ್ರತಿಜ್ಞೆಯಲ್ಲಿ 'ನಾನು ಜುಲುಮೆಯಿಂದ ಆಳಿದರೆ ನನ್ನನ್ನೂ ನನ್ನ ವಂಶಜರನ್ನೂ ಕಿತ್ತಿ ಒಗೆಯಿರಿ' ಎಂಬ ಅರ್ಥದ ವಾಕ್ಯವಿದೆ.* ಒಟ್ಟಿಗೆ ಹೇಳುವುದೇನೆಂದರೆ, ರಾಜಾಧಿಪತ್ಯವು ಮನುಷ್ಯಕೃತ ಸಂಸ್ಥೆಯು. ರಾಜನು ಪ್ರಾಚೀನ ಕಾಲದಲ್ಲಿ ಸಮಿತಿಯ ಅನುಮತಿಯಿಂದ ರಾಜ್ಯವಾಳುತ್ತಿದ್ದನು. ತಳ್ಳಲ್ಪಟ್ಟ ಅರಸನು ಸೌತ್ರಾಮಣಿಯ ಯಜ್ಞವನ್ನು ಮಾಡಬೇಕೆಂದು ಶುಕ್ಲ ಯಜುರ್ವೇದದಲ್ಲಿಯೂ† ಕೃಷ್ಣಯಜುರ್ವೇದದ ತೈತ್ತಿರೀಯ ಬ್ರಾಹ್ಮಣದಲ್ಲಿಯೂ* ಹೇಳಿರುವುದರಿಂದ ಆಗಿನ ಕಾಲಕ್ಕೆ ಅರಸರನ್ನು ತಳ್ಳುವ ಅಧಿಕಾರವು ಜನರಿಗಿತ್ತೆಂಬುದು ಸ್ಪಷ್ಟವಾಗುತ್ತದೆ.

ಮುಂದೆ, ರಾಜಾಧಿಪತ್ಯವು ದಿನದಿನಕ್ಕೆ ಪ್ರಬಲವಾಗುತ್ತ ಹೋದರೂ ಅದರ ಮೂಲತತ್ವವು ಪೂರಾ ಮರೆಯಾಗಿರಲಿಲ್ಲ. ಯುಧಿಷ್ಠಿರನು ಪಟ್ಟವೇರುವ ಮುಂಚೆ ಸಭಾಸದರನ್ನು ಅರ್ಚಿಸುತ್ತಾನೆ.§ ಅಲ್ಲದೆ, ಆತನ ಪಟ್ಟಾಭಿಷೇಕಕ್ಕೆ ವೈಶ್ಯ ಶೂದ್ರ ಮುಂತಾದವರೆಲ್ಲರೂ ಹಾಜರಿರುತ್ತಾರೆ.* ರಾಮನ ಅಭಿಷೇಕ ಕಾಲದಲ್ಲಿ ಬಾಲಿಕೆಯರು ಕೂಡ ನೀರು ಸಿಂಪಡಿಸುತ್ತಾರೆ.

---

* ಐತರೇಯ ಬ್ರಾಹ್ಮಣ ೮–೧೫

† ಶುಕ್ಲಯಜುರ್ವೇದ ೧೯–೨೧ * ತೈತ್ತಿರೀಯ ಬ್ರಾಹ್ಮಣ ೧–೪–೨

§ ಸಭಾಪರ್ವ ೧೩–೪, ೨೬–೨೯

* ಸಭಾಪರ್ವ ೩೩–೪೧–೪೨

ಮಹಾಭಾರತ ಕಾಲದಿಂದ ಚಂದ್ರಗುಪ್ತನ ಕಾಲದವರೆಗೆ ನಮ್ಮ ದೇಶದಲ್ಲಿ ಅನೇಕ ತರಹದ ರಾಜ್ಯಗಳು ಇದ್ದವು. ಕೆಲವು ಏಕ ಸತ್ತಾಕ ರಾಜ್ಯಗಳು, ಮತ್ತೆ ಕೆಲವು ಅಲ್ಪಸತ್ತಾಕ ರಾಜ್ಯಗಳು, (Oligarchies) ಮತ್ತೆ ಕೆಲವು ಬಹುಸತ್ತಾಕ ರಾಜ್ಯಗಳು ಎಂದರೆ ಗಣ ಅಥವಾ ಸಂಘರಾಜ್ಯಗಳು (Democracies). ಪುರು, ಯದು, ಅನು, ತುರ್ವಶ, ದ್ರುಹ್ಯು, ಪಾಂಚಾಲ, ಕ್ರಿವಿ, ಕಾಶಿ, ಕೋಸಲ, ವಿದೇಹ, ಅಂಗ, ಮಗಧ, ವಂಗ ಮುಂತಾದವು ಆಗಿನ ಕಾಲದ ಮಹತ್ವದ ರಾಜ್ಯಗಳು. ಇವುಗಳಲ್ಲಿ ಕಾಶಿ, ಕೋಸಲ, ವಿದೇಹ ಮತ್ತು ವೈಶಾಲಿ ಇವು ಇಕ್ಷ್ವಾಕು ಅಥವಾ ಸೂರ್ಯವಂಶದ ರಾಜ್ಯಗಳು. ಕುರು, ಪಾಂಚಾಲ, ಯದು, ಅನು, ತುರ್ವಶ ಮುಂತಾದವು ಚಂದ್ರ ವಂಶದ ರಾಜ್ಯಗಳು. ಕ್ರಿ. ಪೂ. ೬ನೆಯ ಶತಮಾನದಲ್ಲಿ ಒಟ್ಟು ೧೬ ಮಹಾಜಾನಪದಗಳಿದ್ದವು. (ನಕಾಶೆಯನ್ನು ನೋಡಿರಿ).

**ಅರಸನ ರಾಜಕೀಯ ಸ್ಥಿತಿ**:- ರಾಜಾ, ರಾಣಿ ಮತ್ತು ರಾಜ ಪುತ್ರರೇ ಮುಂತಾದವರ ಸಂಬಳಗಳು ಇಂತಿಷ್ಟೇ ಎಂದು ನಿರ್ದಿಷ್ಟ ವಾಗಿದ್ದವು. ರಾಜನು ಪ್ರಜೆಗಳ ಮೇಲಿನ ಅಧಿಕಾರಿಯಲ್ಲ, ಕೈಕೆಳ ಗಿನ ಆಳು. ಪ್ರಜೆಗಳೇ ಮುಖ್ಯ ಒಡೆಯರು. ಅವರು ಪೌರ ಜಾನಪದ ಸಭೆಗಳ ಮುಖಾಂತರವಾಗಿ ಅರಸನ ಅನಿಯಂತ್ರಿತ ಅಧಿ ಕಾರವನ್ನು ನಿರ್ಬಂಧಿಸುತ್ತಿದ್ದರು. ವಸ್ತುತಃ ಕೌಟಿಲ್ಯನು ರಾಜಪಕ್ಷ ಪಾತಿಯು, ಎಂದರೆ ರಾಜನಿಗೆ ಅತ್ಯಂತ ಗೌರವವನ್ನು ಕೊಡುವ ವನು. ಆದರೆ ಆತನು ಕೂಡ, ಅರಸನು ಮನಬಂದಂತೆ ಮಾಡಕೂಡ ದೆಂದು ಅಭಿಪ್ರಾಯಪಡುತ್ತಾನೆ. ಮತ್ತು ಹೀಗೆಂದು ಹೇಳುತ್ತಾನೆ:-

**ಪ್ರಜಾಸುಖೇ ಸುಖಂ ರಾಜ್ಞಃ ಪ್ರಜಾನಾಂ ಚ ಹಿತೇ ಹಿತಂ ।**
**ನಾತ್ಮಪ್ರಿಯಂ ಹಿತೇ ರಾಜ್ಞಃ ಪ್ರಜಾನಾಂತು ಪ್ರಿಯಂ ಹಿತಂ॥**

ಈ ಬಗೆಯಾಗಿ ಹಿಂದುಸ್ಥಾನ ದೇಶದಲ್ಲಿಯ ಅರಸನು ಹಿಂದಿನ ಪಾಶ್ಚಿಮಾತ್ಯ ರಾಜರಂತೆ ಏಕತಂತ್ರನಾಗಿ ಎಂದೂ ಇರಲಿಲ್ಲ. ಅಲ್ಲಿ ಯಂತೆ ಧಾರ್ಮಿಕ ಮತ್ತು ರಾಜಕೀಯ ಅಧಿಕಾರಗಳೆರಡೂ ಆತನಲ್ಲಿ

ಕೂಡಿರಲಿಲ್ಲ. ಹಿಂದೂ ರಾಜ್ಯಗಳಲ್ಲಿ ಸೇನೆಯು ರಾಜ್ಯದ ಒಂದು ಭಾಗವಾಗಿತ್ತಲ್ಲದೆ ಅದೇ ಎಲ್ಲಕ್ಕಿಂತ ಶ್ರೇಷ್ಠವಾದ ಅಂಗವಾಗಿದ್ದಿಲ್ಲ. ಆದಕಾರಣ, ಅರಸನು ಸೇನೆಯ ಕೈಕೆಳಗಿನ ಗೊಂಬೆಯಾಗಿದ್ದಿಲ್ಲ. ಪಾಶ್ಚಿಮಾತ್ಯ ದೇಶಗಳಲ್ಲಿಯಂತೆ, ಈ ದೇಶದಲ್ಲಿ ಸೈನ್ಯದವರು ಅರಸನನ್ನು ಪಟ್ಟಕ್ಕೆ ಕುಳ್ಳಿರಿಸಿದ ಅಥವಾ ಪಟ್ಟದಿಂದ ತಳ್ಳಿದ ಉದಾಹರಣೆಗಳಿಲ್ಲ. ಸಾರಾಂಶ, ನಮ್ಮ ದೇಶದ ರಾಜ್ಯಗಳಲ್ಲಿ ಲಷ್ಕರಿ ವರ್ಚಸ್ಸು ಕಡಿಮೆ. ಇವೆಲ್ಲ ಕಾರಣಗಳ ಮೂಲಕ, ನಮ್ಮ ದೇಶದಲ್ಲಿ ಹೆಸರಿಗೆ ಅರಸನು ಅನಿಯಂತ್ರಿತ ಅಧಿಕಾರಿಯೆಂದಿದ್ದಾಗ್ಯೂ ಕೂಡ ಆತನಿಗೂ ಪ್ರಜೆಗಳಿಗೂ ನಡುವೆ ಭಯಂಕರ ತಿಕ್ಕಾಟಗಳಾದ ಉದಾಹರಣೆಗಳು ಕಡಿಮೆ.

ನಮ್ಮ ದೇಶದಲ್ಲಿ ಅನೇಕ ಬಗೆಯ ಸಾಮ್ರಾಜ್ಯಪದ್ಧತಿಗಳು ರೂಢವಾಗಿದ್ದವು.

(೧) ರಾಜ್ಯ– Monarchy.

(೨) ಮಹಾರಾಜ್ಯ– Great or high monarchy.

(೩) ಪಾರಮೇಷ್ಠ್ಯ– Superior monarchy.
ಮಹಾರಾಜ್ಯವೆಂದರೆ ಸುತ್ತಲಿನ ರಾಜ್ಯಗಳಿಗಿಂತ ದೊಡ್ಡ ರಾಜ್ಯ. ಅದರ ಘಟನೆ ಹೇಗಿತ್ತೆಂಬುದು ಗೊತ್ತಿಲ್ಲ. ಪಾರಮೇಷ್ಠ್ಯವೆಂಬುದು ಒಂದು ಬಗೆಯ ರಾಜ್ಯಘಟನೆ.

(೪) ಆಧಿಪತ್ಯ– ಇದರಲ್ಲಿ ಒಂದು ರಾಜ್ಯವು ಮಿಕ್ಕ ಕೆಲವು ರಾಜ್ಯಗಳ ಮೇಲೆ ಒಂದು ಬಗೆಯ ಒಡೆತನವನ್ನು ನಡೆಸುತ್ತಿತ್ತು.

(೫) ಸಾರ್ವಭೌಮ– ಯಾವುದೊಂದು ದೊಡ್ಡ ಪ್ರದೇಶದ ಮೇಲೆ ಮತ್ತು ಅದರಲ್ಲಿದ್ದ ಯಾವತ್ತು ಪ್ರಜೆಗಳ ಮೇಲೆ ಅಧಿಕಾರ. ಇದು ಜಾನರಾಜ್ಯದ ವಿರುದ್ಧ ಪದ್ಧತಿಯು. ಜಾನರಾಜ್ಯದಲ್ಲಿ ಜನರೇ ರಾಜರು. ಇದರಲ್ಲಿ ಜನರು ಕೇವಲ ಪ್ರಜೆಗಳು. ಅರಸನೇ ಮುಖ್ಯ ಒಡೆಯನು.

(೬) ಸಾಮ್ರಾಜ್ಯ- ಇದು ಆಧಿಪತ್ಯ ಮತ್ತು ಸಾರ್ವಭೌಮಕ್ಕಿಂತಲೂ ಪ್ರಾಚೀನವಾದುದು. ವೈದಿಕ ಗ್ರಂಥಗಳಲ್ಲಿ ಇದೂ

ಅನೇಕ ಸಲ ಉಲ್ಲೇಖಿಸಲ್ಪಡುತ್ತದೆ. ಐತರೇಯ ಬ್ರಾಹ್ಮಣದಲ್ಲಿ ಅದು ರಾಜನಿಲ್ಲದ ರಾಜ್ಯಗಳೊಳಗೆ ಅತಿ ಮುಖ್ಯವಾದುದೆಂದು ಗಣಿಸಲ್ಪಟ್ಟಿದೆ. ಇದು ಸಕೃದ್ದರ್ಶನಕ್ಕೆ ಆಶ್ಚರ್ಯಕರವಾಗಿ ತೋರಬಹುದು. ಆದರೆ, ನಿಜವಾಗಿ ವಿಚಾರ ಮಾಡಿದರೆ, ಆಶ್ಚರ್ಯಪಡುವ ಕಾರಣವೇನೂ ಇಲ್ಲ. ಏಕೆಂದರೆ ಸಾಮ್ರಾಜ್ಯವೆಂದರೆ ಅನೇಕ ರಾಜ್ಯಗಳ ಗುಂಪು. ಅನೇಕ ರಾಜ್ಯಗಳು ಯಾವುದೊಂದು ರಾಜ್ಯದ ಒಡೆತನದ ಕೆಳಗೆ ಒಟ್ಟುಗೂಡಿದರೆ ಅದಕ್ಕೆ ಸಾಮ್ರಾಜ್ಯವೆನ್ನಬೇಕು. ಅವೆಲ್ಲ ರಾಜ್ಯಗಳ ಅಧ್ಯಕ್ಷನಿಗೆ ಸಮ್ರಾಟನೆಂದು ಹೆಸರು. ಮಹಾಭಾರತ ಕಾಲದಲ್ಲಿ ಜರಾಸಂಧನು ಈ ಬಗೆಯ ಸಮ್ರಾಟನಾಗಿದ್ದನು. ಅರಸರೆಲ್ಲರೂ ಕೂಡಿ ಈ ಸಮ್ರಾಟನನ್ನು ಆರಿಸುತ್ತಿದ್ದರು. ಆದರೆ ಮುಂದೆ ಆ ಸಮ್ರಾಟನೇ ಪ್ರಬಲನಾಗಿ ತನ್ನ ಅಧಿಕಾರದ ದುರುಪಯೋಗ ಮಾಡಿಕೊಳ್ಳುತ್ತಿದ್ದನು. ಆ ಮಾತು ಬೇರೆ. ಈ ಸಮ್ರಾಟ್ ಪದವಿಗೆ ರಾಜರಲ್ಲಿ ಯಾವನು ಅತ್ಯಂತ ಯೋಗ್ಯನೋ ಆತನು ಆರಿಸಲ್ಪಡುತ್ತಿದ್ದನು. ಈ ಕಾರಣದ ಮೂಲಕವೇ ಐತರೇಯ ಬ್ರಾಹ್ಮಣವು ಸಾಮ್ರಾಜ್ಯವನ್ನು ರಾಜನಿಲ್ಲದ ರಾಜ್ಯಗಳಲ್ಲಿ ಗಣಿಸಿದಂತೆ ತೋರುತ್ತದೆ. ಏಕೆಂದರೆ ಅದರಲ್ಲಿ, ಸಮ್ರಾಟನು ಆರಿಸಲ್ಪಡುತ್ತಿದ್ದನು.

ಆದರೆ, ಬೃಹದ್ರಥನ ಕಾಲದಿಂದೀಚೆಗೆ ಸಾರ್ವಭೌಮ ಪದ್ಧತಿಯು ಪ್ರಬಲವಾಯಿತು. ಕೋಸಲ, ಮಗಧ ಮತ್ತು ಅವಂತಿ ಇವು ಆಗಿನ ಕಾಲದ ಮೂರು ದೊಡ್ಡ ಸಾರ್ವಭೌಮ ರಾಜ್ಯಗಳು. ಮುಂದೆ, ಇವು ಮೂರು ಹೋಗಿ ಮಗಧ ದೇಶದಲ್ಲಿ ಕ್ರಿ. ಪೂ. ೬೫೦ ರ ಸುಮಾರಕ್ಕೆ ದೊಡ್ಡ ಸಾರ್ವಭೌಮ ರಾಜ್ಯವು ಸ್ಥಾಪಿತವಾಯಿತು. ಚಂದ್ರಗುಪ್ತ ಮೌರ್ಯನು ಮುಂದೆ ಬಲಿಷ್ಠನಾದ ಸಾರ್ವಭೌಮನಾದನು.

ಮತ್ತೊಂದು ತೆರಹದ ರಾಜ್ಯಪದ್ಧತಿಯೆಂದರೆ ಚಕ್ರವರ್ತಿ ರಾಜ್ಯಪದ್ಧತಿ. ಚಕ್ರವರ್ತಿಯೆಂದರೆ ಅನೇಕ ಮಾಂಡಲಿಕ ಅರಸರ ಮೇಲಿನ ಮುಖ್ಯ ರಾಜನು. ಬುದ್ಧನು ಧಾರ್ಮಿಕ ಕ್ಷೇತ್ರದಲ್ಲಿ ತಾನು ಚಕ್ರವರ್ತಿಯೆಂದೆನಿಸಿಕೊಂಡನು. ಮಹಾವೀರನು ಜಿನ ಅಂದರೆ ಜಯಿಸಿದವನೆಂದೆನಿಸಿಕೊಂಡನು. ಸಾರಾಂಶ, ಆಗಿನ ಕಾಲ ದಲ್ಲಿ, ರಾಜಕೀಯ ಮತ್ತು ಧಾರ್ಮಿಕ ಕ್ಷೇತ್ರಗಳಲ್ಲಿ ಹೊಸ ಹೊಸ ಪ್ರದೇಶಗಳನ್ನು ಜಯಿಸಿಕೊಳ್ಳುವುದು ಸರ್ವಮಾನ್ಯ ಪದ್ಧತಿಯಾ ಗಿತ್ತು. ತಮ್ಮಷ್ಟಕ್ಕೆ ತಾವು ಇದ್ದರೆ ಸಮಾಧಾನವಿದ್ದಿಲ್ಲ. ಸುತ್ತ ಲಿದ್ದವರನ್ನು ಜಯಿಸಿ ತಮ್ಮ ಅಂಕಿತದಲ್ಲಿಟ್ಟುಕೊಳ್ಳುವುದೇ ಈ ರಾಜ್ಯ ಪದ್ಧತಿಯ ಮುಖ್ಯ ಧೋರಣ. ಇದರಿಂದ, ದೇಶದಲ್ಲಿ ಒಂದು ಬಗೆಯ ಐಕ್ಯವೇನೋ ಉಂಟಾಯಿತು. ಆದರೆ ಜನತೆಯ ಜೀವವು ಕಡಿಮೆಯಾಯಿತು. ಆದಕಾರಣ, ಈ ಚಕ್ರವರ್ತಿ ರಾಜ್ಯಪದ್ಧತಿಯು ಬಹಳ ದಿವಸ ಬಾಳಲಿಲ್ಲ. ಗುಪ್ತರ ಕಾಲದಲ್ಲಿ ಅದರ ಸ್ವರೂಪವು ಬದಲಾಯಿತು. ಗುಪ್ತರು ಚಕ್ರವರ್ತಿಗಳಾದರೂ ಅವರು ಚಿಕ್ಕ ರಾಜ್ಯಗಳೆಲ್ಲವನ್ನೂ ನುಂಗಲಿಲ್ಲ. ಅವನ್ನು ಜೀವಂತ ಇರಗೊಟ್ಟರು. ಆದರೆ, ಇವೆಲ್ಲ ರಾಜ್ಯಪದ್ಧತಿಗಳಲ್ಲಿ ಒಟ್ಟಿನ ಮೇಲೆ ಜನತೆಯ ವರ್ಚಸ್ಸು ಕಡಿಮೆ.

---

## ೮ನೆಯ ಪ್ರಕರಣ

# ಜಾನಪದ ಮತ್ತು ಪೌರ



ಹೋದ ಪ್ರಕರಣದಲ್ಲಿ, ರಾಜಾಧಿಪತ್ಯದ ಮೂಲ ಕಲ್ಪನೆಯ ವಿಷಯವಾಗಿ ಹೇಳಿದೆವಷ್ಟೆ. ರಾಜಾಧಿಪತ್ಯವು ಮುಂಚೆ ಮುಂಚೆ ಸಮಿತಿಗಳಿಗೆ ಅಂಕಿತವಾಗಿತ್ತು. ಮುಂದೆ ಸಮಿತಿಗಗಳ ಸ್ಥಳದಲ್ಲಿ ಪೌರ ಮತ್ತು ಜಾನಪದಗಳೆಂಬ ಸಂಸ್ಥೆಗಳು ಅಸ್ತಿತ್ವದಲ್ಲಿ ಬಂದಾಗ ಅದು ಆ ಪೌರ ಮತ್ತು ಜಾನಪದ ಸಂಸ್ಥೆಗಳಿಗೆ ಅಂಕಿತವಾಗಿತ್ತು.

# ಮಹಾಭಾರತ ಕಾಲದ
## ವಿವಿಧ ರಾಜ್ಯಗಳು.



ಈ ಪ್ರಕರಣದಲ್ಲಿ ಈ ಪೌರ ಮತ್ತು ಜಾನಪದ ಸಂಸ್ಥೆಗಳನ್ನು ಕುರಿತು ಹೇಳುವೆವು.

ವೈದಿಕ ಕಾಲದ ನಂತರದ ಕಾಲದಲ್ಲಿ, ಎಂದರೆ ಭಾರತ ಯುದ್ಧದ ಕಾಲದಿಂದ ಬೃಹದ್ರಥನ (ಕ್ರಿ. ಪೂ. ೭೦೦) ಕಾಲದ ವರೆಗಿನ ಕಾಲದಲ್ಲಿ ನಮ್ಮ ದೇಶದಲ್ಲಿ ಜನಪದ ರಾಜ್ಯಗಳಿದ್ದವು. ಎಂದರೆ ಒಂದೇ ಸಂಸ್ಕೃತಿಯುಳ್ಳ ಜನಾಂಗಗಳು ತಮ್ಮ ತಮ್ಮ ರಾಜ್ಯಗಳನ್ನು ಕಟ್ಟಿಕೊಂಡಿದ್ದವು. ಆ ಜನಾಂಗಗಳು ವಾಸಮಾಡುವ ಪ್ರದೇಶಕ್ಕೂ ಅವರ ಹೆಸರುಗಳೇ ಇದ್ದವು. ಉದಾ:– ಭಾರತ, ಪಾಂಚಾಲ, ವಿದೇಹ, ಇಕ್ಷ್ವಾಕು ಮುಂತಾದ ಜನಾಂಗಗಳಿಗೆ ಆಯಾ ಜನಾಂಗದ ಜನರೇ ಅರಸರಾಗಿದ್ದರು. ಮುಂದೆ ಕ್ರಿ. ಪೂ. ೬೦೦ ನೆಯ ಇಸ್ವಿಯ ಸುಮಾರನಲ್ಲಿ ಈ ಸ್ಥಿತಿಯು ಬದಲಾಯಿತು. ಆಗ ಜನಾಂಗ ರಾಜ್ಯ (National) ಹೋಗಿ ಅವುಗಳ ಬದಲು ರಾಷ್ಟ್ರ ರಾಜ್ಯ (Territorial) ಗಳು ನಿರ್ಮಾಣವಾದವು. ಅಂದರೆ ಒಂದೊಂದು **ಪ್ರದೇಶಕ್ಕೆ** ಒಬ್ಬೊಬ್ಬ ಅರಸನಾದನು. ಆ ಅರಸನು ಆಳುವ ಪ್ರದೇಶದಲ್ಲಿ ಒಂದೇ ಸಂಸ್ಕೃತಿಯುಳ್ಳ ಜನರೇ ಇರಬೇಕೆಂಬ ನಿಯಮವಿರಲಿಲ್ಲ. ಆತನು ಆ ಪ್ರದೇಶದ ಅರಸನು– ಆ ಪ್ರದೇಶದಲ್ಲಿ ಎಷ್ಟೇ ಭಿನ್ನ ಭಿನ್ನ ಸಂಸ್ಕೃತಿಯುಳ್ಳ ಜನರು ವಾಸಿಸಿರಲಿ– ಅವರೆಲ್ಲರಿಗೂ ಆತನು ಅರಸನು. ಆಗ, ಚಿಕ್ಕ ಚಿಕ್ಕ ಜನಾಂಗಗಳು ಹೋಗಿ ಅವುಗಳ ಬದಲು ದೊಡ್ಡ ದೊಡ್ಡ ದೇಶಾಂಗಗಳು ಅಥವಾ ರಾಷ್ಟ್ರಗಳು ನಿರ್ಮಾಣವಾದವು. ಇಕ್ಷ್ವಾಕು ಜನಾಂಗವು ಕಾಶಿ, ಕೋಸಲ ಮತ್ತು ಮಗಧ ದೇಶಗಳಾದವು. ಆಗ ಜನತೆಗಿಂತಲೂ ಪ್ರದೇಶಕ್ಕೆ ಹೆಚ್ಚಿಗೆ ಮಹತ್ವವುಂಟಾಯಿತು. ಆದಕಾರಣ, ಸಮಿತಿಗಳು ಮೆಲ್ಲಮೆಲ್ಲನೆ ನಷ್ಟಹೊಂದಿದವು. ಏಕೆಂದರೆ ಸಮಿತಿಯೆಂದರೆ ಒಂದು ಜನಾಂಗದ ಸಭೆಯು. ಜನಾಂಗವು ಒಡೆದು ಹೋಗಿ ನಾನಾ ಪ್ರದೇಶಗಳನ್ನಾಕ್ರಮಿಸಿದಾಗ, ಆ ಸಮಿತಿಗಳ ಸ್ಥಳದಲ್ಲಿ ಹೊಸ ಸಂಸ್ಥೆಗಳು ಹುಟ್ಟುವದು ಅವಶ್ಯವಾಯಿತು. ಪೌರ ಮತ್ತು ಜಾನಪದ ಎಂಬವೇ ಆ ತರಹದ ಹೊಸ ಸಂಸ್ಥೆಗಳು. ಚಿಕ್ಕ ಚಿಕ್ಕ ಜನಾಂಗ ರಾಜ್ಯಗಳು ಹೋಗಿ, ಹಿಂದುಸ್ಥಾನ

ದಲ್ಲಿ ದೊಡ್ಡ ದೊಡ್ಡ ಸಾಮ್ರಾಜ್ಯಗಳು ಸ್ಥಾಪಿತವಾದಾಗ ಈ ಪೌರ ಮತ್ತು ಜಾನಪದ ಸಂಸ್ಥೆಗಳು ನಿರ್ಮಾಣವಾದವು. ಕ್ರಿ. ಪೂ. ೬೦೦ ರಿಂದ ಕ್ರಿ. ಶಕದ ನಂತರದ ೬೨೦ ವರ್ಷಗಳಲ್ಲಿ, ಹಿಂದುಸ್ಥಾನ ದೇಶದ ರಾಜ್ಯಗಳಲ್ಲಿ ಮುಖ್ಯ ಎರಡು ಭಾಗಗಳಾದವು. (೧) ಜನಪದ, ರಾಷ್ಟ್ರ ಅಥವಾ ದೇಶ. (೨) ಪುರ, ನಗರ ಅಥವಾ ದುರ್ಗ. ರಾಜಧಾನಿಗಳಿಗೆ ಅಥವಾ ಪಟ್ಟಣಗಳಿಗೆ ಆಗ ಮಹತ್ವವು ಪ್ರಾಪ್ತವಾಯಿತು. ಹಳ್ಳಿಗಳೆಲ್ಲವೂ ಕೂಡಿ ಜಾನಪದ, ರಾಷ್ಟ್ರ ಅಥವಾ ದೇಶವೆಂದು ಕರೆಯಲ್ಪಡುತ್ತಿತ್ತು. ಸಮಿತಿಯ ಸ್ಥಳದಲ್ಲಿ ಜಾನಪದ ಸಭೆಯು ಬಂದಿತು. ಜಾನಪದದ ಅಧ್ಯಕ್ಷನಿಗೆ ಜಾನಪದ ಮಹತ್ತರ ಮತ್ತು ರಾಷ್ಟ್ರಮುಖ್ಯನೆಂದು ಹೆಸರು. ರಾಜಧಾನಿ ಪಟ್ಟಣದ ರಾಜಕೀಯ ವ್ಯವಸ್ಥೆಯು ಪ್ರತ್ಯೇಕವಾಗಿಯೇ ಇತ್ತು. ಅದಕ್ಕೆ ಪೌರವೆಂದು ಹೆಸರು.

ಈ ಪೌರಸಭೆಗಳೆಂದರೆ ಈಗಿನ ಮ್ಯುನಿಸಿಪಾಲಿಟಿಗಳೆಂದು ಸ್ಥೂಲಮಾನದಿಂದ ಹೇಳಬಹುದು. ಈ ಪೌರಸಭೆಯ ಅಧ್ಯಕ್ಷನಿಗೆ ಶ್ರೇಷ್ಠಿನ್ ಎಂದು ಹೆಸರು. ಪೌರ ಮತ್ತು ಜಾನಪದಗಳಲ್ಲಿ ಎರಡು ಮಂಡಳಗಳಿದ್ದವು. (೧) ಒಳಮಂಡಳ (೨) ಹೊರಮಂಡಳ. ಒಳಮಂಡಲವು ಕಾರ್ಯನಿರ್ವಾಹಕ ಮಂಡಳವು. ಇದರ ಸದಸ್ಯರಿಗೆ ಪೌರವೃದ್ಧರೆಂದೂ ಹೆಸರು. ಅವರಲ್ಲಿ ಶೂದ್ರರೂ ಇರುತ್ತಿದ್ದರು. ಈ ಪೌರಸಭೆಯವರು ಊರ ಕಾರಭಾರವನ್ನು ನೋಡಿಕೊಳ್ಳುತ್ತಿದ್ದರು. ಅವರು ರಾಜಕೀಯ ಕೆಲಸಗಳನ್ನು ಮಾಡುವುದಲ್ಲದೆ, ಜನರಿಗೆ ಹಿತದಾಯಕವಾದ ಕೆಲಸಗಳನ್ನು ಮಾಡುತ್ತಿದ್ದರು. ಪೌರ ಸಭೆಗಳನೇಕಗಳಿಗೆ ತಮ್ಮ ನಾಣ್ಯಗಳನ್ನು ತಾವು ಹುಟ್ಟಿಸುವ ಅಧಿಕಾರವೂ ಇತ್ತು. ಈ ಪೌರಸಭೆಗೂ ವರ್ತಕರ ಸಭೆ ಎಂದರೆ ನೈಗಮಗಳಿಗೂ ನಿಕಟವಾದ ಸಂಬಂಧವಿತ್ತು. ಮತ್ತೆ ಕೆಲವು ವರ್ತಕರ ಸಭೆಗಳಿಗೆ ಶ್ರೇಣಿ ಅಥವಾ ಪೂಗ ಎಂದು ಹೆಸರು. ನೈಗಮ ಸಭೆಗಳಿಗೆ ನಾಣ್ಯಗಳನ್ನು ಮಾಡುವ ಅಧಿಕಾರ ಕೂಡ ಇರುತ್ತಿತ್ತು.

ಜಾನಪದ ಸಭೆಗೂ ನಾಣ್ಯಗಳನ್ನು ಮಾಡುವ ಅಧಿಕಾರವಿರುತ್ತಿತ್ತು. ಪೌರ ಮತ್ತು ಜಾನಪದ ಸಭೆಗಳು ಕೂಡಿ ದೇಶದ ರಾಜ

ಕೀಯ ವ್ಯವಸ್ಥೆಯನ್ನು ನೋಡುತ್ತಿದ್ದವು. ಅಲ್ಲದೆ ಪೌರ ಸಭೆಯು ಪಟ್ಟಣದ ಸ್ಥಾನಿಕ ವ್ಯವಸ್ಥೆಯನ್ನೂ ನೋಡುತ್ತಿತ್ತು. ಪೌರ-ಜಾನಪದಸಭೆಯು ಅರಸನ ಅಭಿಷೇಕವನ್ನು ಮಾಡುತ್ತಿತ್ತು. ಈ ಪೌರ ಜಾನಪದ ಸಭೆಯಲ್ಲಿ ಅನೇಕ ಉಪಮಂಡಳಗಳಿರುತ್ತಿದ್ದವು. ಉದಾ:- (೧) ತೀರ್ಥ-ಸಭಾ-ಶಾಲಾಸಮವಾಯವೆಂಬ ಉಪಮಂಡಲವು ತೀರ್ಥ ಮತ್ತು ಸಾರ್ವಜನಿಕ ಕಟ್ಟಡಗಳ ವ್ಯವಸ್ಥೆಯನ್ನು ನೋಡುತ್ತಿತ್ತು. (೨) ಪೂಗ ಸಮವಾಯವೆಂಬುದು ಉದ್ಯೋಗ ಧಂದೆಗಳ ವ್ಯವಸ್ಥೆ ನೋಡುತ್ತಿತ್ತು. ಮಹತ್ವದ ಕರ ಮುಂತಾದವುಗಳನ್ನು ಕೂಡಿಸುವಾಗ ಅರಸನಿಗೆ ಈ ಪೌರ ಜಾನಪದ ಸಭೆಯ ಸಮ್ಮತಿಯನ್ನು ತೆಗೆದುಕೊಳ್ಳಬೇಕಾಗುತ್ತಿತ್ತು. ಅರಸನಿಗೆ ಹೆಚ್ಚಿನ ಕರಗಳನ್ನು ಹೇರಲಿಕ್ಕೆ ಪರವಾನಿಗೆಯನ್ನು ಕೊಡುವಾಗ ಪೌರ ಜಾನಪದ ಸಭೆಯು ಆತನಿಂದ ಅನೇಕ ಅನುಗ್ರಹ ಅಥವಾ ಹಕ್ಕುಗಳನ್ನು ಸಂಪಾದಿಸುತ್ತಿತ್ತು. ಅಲ್ಲದೆ ಅನೇಕ ಕರಗಳ ಸಂಬಂಧವಾಗಿ ಪರಿಹಾರವನ್ನು ಅಂದರೆ ಬಿಡುಗಡೆಯನ್ನು ಸಂಪಾದಿಸುತ್ತಿತ್ತು. ಅರಸನು ಪ್ರತಿನಿತ್ಯ ಕೆಲಕಾಲ ಈ ಪೌರ ಜಾನಪದ ಸಭೆಗೆ ಬರಲೇಬೇಕೆಂದು ನಿರ್ಬಂಧವಿತ್ತು. ಈ ಸಭೆಗೆ ಯುದ್ಧವನ್ನು ಜಾಹೀರಮಾಡುವ ಅಥವಾ ನಿಲ್ಲಿಸುವ ಅಧಿಕಾರವಿತ್ತು. ಸಭೆಗೆ ತನ್ನ ನಿಯಮಗಳನ್ನು ಮಾಡಿಕೊಳ್ಳುವ ಅಧಿಕಾರವಿತ್ತು. ಅವುಗಳಿಗೆ ಸಮಯವೆನ್ನುತ್ತಿದ್ದರು. ಇವಲ್ಲದೆ, ಇಡೀ ಜನಾಂಗದ ಸಲುವಾಗಿ ನಿಯಮಗಳನ್ನು ಮಾಡುವ ಅಧಿಕಾರವೂ ಇತ್ತು. ಅವಕ್ಕೆ ಸಂವಿತ್ತುಗಳೆಂದು ಹೆಸರು. ಹೀಗೆ ಈ ಪೌರ ಜಾನಪದ ಸಂಸ್ಥೆಗಳು ಅರಸನ ಅಧಿಕಾರಕ್ಕೆ ಬಿಗಿಯಾದ ಮುಗದಾಣಗಳಾಗಿದ್ದವು.

---

## ೯ನೆಯ ಪ್ರಕರಣ

## ರಾಜ್ಯಯಂತ್ರ

ಹಿಂದಿನ ಪ್ರಕರಣಗಳಲ್ಲಿ ಪ್ರಾಚೀನ ರಾಜ್ಯಪದ್ಧತಿಗಳನ್ನು ಕುರಿತು ವಿವೇಚಿಸಿದ್ದಾಯಿತು. ಇನ್ನು ಈ ಪ್ರಕರಣದಲ್ಲಿ, ಆ ರಾಜ್ಯ

ಪದ್ಧತಿಗಳನ್ನು ನಡಿಸುವುದಕ್ಕೆ ಯಾವ ತೆರಹದ ರಾಜ್ಯಯಂತ್ರವು ನಿರ್ಮಾಣವಾಗಿತ್ತೆಂಬುದನ್ನು ನೋಡುವ; ಅಂದರೆ ಯಾರ ಯಾರ ಸಹಾಯದಿಂದ ಅರಸರೇ ಆಗಲಿ, ಸಮಿತಿಗಳೇ ಆಗಲಿ, ಪೌರ-ಜಾನಪದ ಸಂಸ್ಥೆಗಳೇ ಆಗಲಿ ತಮ್ಮ ಕಾರಭಾರವನ್ನು ನಡಿಸುತ್ತಿದ್ದವೆಂಬುದನ್ನು ಹೇಳುವೆವು. ಅರ್ಥಾತ್, ಎಲ್ಲ ಕಾಲಕ್ಕೂ ಎಲ್ಲ ಪ್ರದೇಶಗಳಲ್ಲಿಯೂ ಒಂದೇ ಬಗೆಯದಾಗಿದ್ದಿಲ್ಲ. ಆದರೂ, ಸ್ಥೂಲಮಾನದಿಂದ ಅದರ ಸ್ವರೂಪವು ಕೆಳಗೆ ಕಾಣಿಸಿದಂತೆ ಇತ್ತೆಂದು ಹೇಳಬಹುದು.

ಅಧಿಕಾರಿ ಮಂಡಲದಲ್ಲಿ ಅನೇಕ ವರ್ಗಗಳಿದ್ದವು. ಮೊದಲಿನ ಎಂದರೆ ಎಲ್ಲಕ್ಕೂ ಹೆಚ್ಚಿನ ಅಧಿಕಾರಸ್ಥರೆಂದರೆ (೧) ಮಂತ್ರಿ (೨) ಸೇನಾಪತಿ (೩) ಯುವರಾಜ. ಯುವರಾಜನೂ ಒಬ್ಬ ಅಧಿಕಾರಿಯು. ಯಾವುದೊಂದು ಪ್ರಾಂತವನ್ನಾಳುವುದಕ್ಕೆ ಅವನು ಗವ್ಹರ್ನರನಾಗಿ ನೇಮಿಸಲ್ಪಡುತ್ತಿದ್ದನು. ಎರಡನೆಯ ವರ್ಗದಲ್ಲಿ, ೫ ಜನ ಅಧಿಕಾರಿಗಳಿರುತ್ತಿದ್ದರು. (೧) ದೌವಾರಿಕ- ಪ್ರತಿಹಾರ (Private Secretary of the King. (೨) ಅಂತರ್ವಂಶಿಕ Superintendent of inner or ladies department. (೩) ಪ್ರಶಸ್ತಾ- Superintendent of the department of Royal Writs (೪) ಸನ್ನಿಧಾತಾ- ಒಬ್ಬ ಕಾರ್ಯನಿರ್ವಾಹಕ ಮುಖ್ಯ ಅಧಿಕಾರಸ್ಥ. ಆತನು ಮಾಡತಕ್ಕ ಕಾರ್ಯಗಳನ್ನು ಮುಂದೆ ನಿವೇದಿಸಿದೆ. (೫) ಸಮಾಹರ್ತಾ- ಈತನೂ ಒಬ್ಬ ಕಾರ್ಯನಿರ್ವಾಹಕ ಅಧಿಕಾರಿ. ಈತನ ಕರ್ತವ್ಯಗಳೂ ಮುಂದೆ ಹೇಳಲ್ಪಟ್ಟಿವೆ.

ಸನ್ನಿಧಾತನು ಮುಂದೆ ಕಾಣಿಸಿದ ಶಾಖೆಗಳ ಅಧ್ಯಕ್ಷರ ಮೇಲಿನ ಮುಖ್ಯ ಮೇಲ್ವಿಚಾರಕನು. (೧) ಕೋಶಾಧ್ಯಕ್ಷ- Treasury (೨) ಪಣ್ಯಾಧ್ಯಕ್ಷ- Trade (೩) ಕೋಷ್ಠಾಗಾರ ಅಧ್ಯಕ್ಷ- Store house (೪) ಕುಪ್ಯಾಧ್ಯಕ್ಷ Forest stores (೫) ಆಯುಧಾಗಾರಾಧ್ಯಕ್ಷ- Arsenal (೬) ಬಂಧನಾಗಾರಾಧ್ಯಕ್ಷ- Prisons. ಈ ಶಾಖೆಗಳಲ್ಲದೆ ಮೇಲ್ಕಾಣಿಸಿದ ಶಾಖೆಗಳ ಸಲುವಾಗಿ ಕಟ್ಟಿಸಿದ

ಕಟ್ಟಡಗಳೂ ಧರ್ಮಸ್ಥೀಯ (Law-courts) ಕಟ್ಟಡಗಳೂ ಮತ್ತು ಮಿಕ್ಕ ಅಧಿಕಾರಿಗಳ ಕಟ್ಟಡಗಳೂ ಆತನ ವಶದಲ್ಲಿ ಇದ್ದವು.

ಸಮಾಹರ್ತನ ಕಾರ್ಯಗಳು ಯಾವುವೆಂದರೆ:- (೧) ದೇಶದ ಸ್ಥಿತಿಗತಿಗಳನ್ನು ತಿಳಿದುಕೊಳ್ಳುವ ಶಾಖೆಯನ್ನು ನಡಿಸುವುದು ಮತ್ತು ಭೂಮಿಯ ಅಳತೆಯನ್ನು ಮಾಡುವುದು. (೨) ಸರಕಾರಕ್ಕೆ ಸಲ್ಲತಕ್ಕ ಯಾವತ್ತು ಬಗೆಯ ಕರಗಳನ್ನು ಮತ್ತು ಅನ್ಯ ಹಣಗಳನ್ನು ಪ್ರತ್ಯಕ್ಷವಾಗಿ ಅಥವಾ ಮಿಕ್ಕ ಶಾಖೆಗಳ ಮುಖಾಂತರ ವಸೂಲ ಮಾಡುವುದು. (೩) ಲೆಕ್ಕಪತ್ರಗಳನ್ನು ನೋಡುವುದು, ಮತ್ತು ಜಮಾಖರ್ಚನ್ನಿಡುವುದು. (೪) ಸಮಾಹರ್ತನು ಒಬ್ಬ ಅಮಾತ್ಯನು. ಆತನು ಮಿಕ್ಕ ಇಬ್ಬರೊಡನೆ ಕೂಡಿಕೊಂಡು ಕಂಟಕಶೋಧನ (Criminal) ಕೋರ್ಟುಗಳಲ್ಲಿಯ ಖಟ್ಲೆಗಳನ್ನು ನಡಿಸುತ್ತಿದ್ದನು. (೫) ಸರಕಾರದ ಅಧಿಕಾರಿಗಳಿಂದಾಗುವ ಅಪರಾಧಗಳನ್ನು ಹುಡುಕಿ ತೆಗೆದು ಅವರನ್ನು ಶಿಕ್ಷಿಸುವುದು. ಇದಕ್ಕೋಸ್ಕರ ಆತನ ಕೈಕೆಳಗೆ ಒಂದು ಗುಪ್ತಚಾರಿಗಳ ಶಾಖೆಯಿತ್ತು.

ಇನ್ನು ಮೂರನೆಯ ವರ್ಗದ ಅಧಿಕಾರಿಗಳನ್ನು ಹೇಳುವ. ಕೋಶಾಧ್ಯಕ್ಷ- ಈತನೂ ಆಕರಾಧ್ಯಕ್ಷನು. ಎಂದರೆ ಸುವರ್ಣ ಮುಂತಾದ ಧಾತುಗಳನ್ನೂ ಮುತ್ತು ಹವಳಾದಿಗಳನ್ನೂ ಸಂಗ್ರಹಿಸುವ ಅಧಿಕಾರಿ. ಇವರಿಬ್ಬರೂ ಸನ್ನಿಧಾತನ ಕೈಯಲ್ಲಿಯ ಅಧಿಕಾರಿಗಳು. ಪಣ್ಯಾಧ್ಯಕ್ಷನ ಕೈಕೆಳಗೆ (೧) ಪೌತವಾಧ್ಯಕ್ಷ- ಅಂದರೆ ತೂಕಗಳ ಮೇಲಿನ ಅಧಿಕಾರಿ (೨) ಮಾನಾಧ್ಯಕ್ಷ- ಅಳತೆಗಳ ಮೇಲಿನ ಅಧಿಕಾರಿ. ಹೀಗೆ ಇಬ್ಬರು ಅಧಿಕಾರಿಗಳಿರುತ್ತಿದ್ದರು. ಇವರೆಲ್ಲರೂ ಸನ್ನಿಧಾತನ ಕೈಕೆಳಗೆ ಕೆಲಸ ಮಾಡುತ್ತಿದ್ದರು. ಕೋಷ್ಠಾಗಾರ ಮತ್ತು ಕುಪ್ಯಾಗಾರಗಳ ಅಧ್ಯಕ್ಷರೂ ಮೂರನೇ ವರ್ಗದ ಅಧಿಕಾರಿಗಳು. ಇವರು ಲಷ್ಕರೀ ಮುಂತಾದ ಯಾವತ್ತು ಖಾತೆಗಳಿಗೆ ಬೇಕಾಗುವ ಅನ್ನಬಟ್ಟೆಗಳನ್ನು ಪೂರೈಸುತ್ತಿದ್ದರು. ಮತ್ತು ಅಧಿಕಾರಿಗಳಿಗೆ ಕಾಳಿನ ರೂಪದಿಂದ ಕೊಡತಕ್ಕ ಸಂಬಳಗಳನ್ನು ತಲುಪಿಸುತ್ತಿದ್ದರು. **ಆಯುಧಾಗಾರ** ಶಾಖೆಗೂ **ಸಾಹಸಾಧಿಕಾರ** (Police) ಶಾಖೆಗೂ ಲಷ್ಕರಿ

ಶಾಖೆಗೂ ನಿಕಟ ಸಂಬಂಧವಿತ್ತು. **ಬಂಧನಾಗಾರ** ಶಾಖೆಗೂ ಧರ್ಮಸ್ಥಿಯ (Law courts) ಮತ್ತು ಕಂಟಕಶೋಧನ (Criminal) ಶಾಖೆಗಳಿಗೂ ಸಂಬಂಧವಿತ್ತು.

ಇವರಲ್ಲದೆ, ಅನೇಕ ಬಗೆಯ ಅಧಿಕಾರಿಗಳಿದ್ದರು. ಅವರಲ್ಲಿ ಕೆಲವರ ಹೆಸರುಗಳನ್ನು ಇಲ್ಲಿ ಕೊಡುತ್ತೇವೆ. (೧) ಶುಲ್ಕಾಧ್ಯಕ್ಷ- ಶುಲ್ಕವನ್ನು ಅಂದರೆ ಖನಿ, ಸೇತು, ವನ, ದ್ವಾರದೇಯ ಮುಂತಾದ ಸುಂಕಗಳನ್ನು ವಸೂಲು ಮಾಡುವವನು. (೨) ಸೀತಾಧ್ಯಕ್ಷ- ಒಕ್ಕಲತನ ಶಾಖೆಯ ಮುಖ್ಯಸ್ಥನು. (೩) ಸುರಾಧ್ಯಕ್ಷ- ಸಾರಾಯಿಯ ಅಂಗಡಿಗಳ ವ್ಯವಸ್ಥೆ ಈತನ ಕಡೆಗೆ ಇರುತ್ತಿತ್ತು. (೪) ಸೂನಾಧ್ಯಕ್ಷ- ವನದಲ್ಲಿಯ ಪಶುಪಕ್ಷಿಗಳನ್ನು ಯಾರೂ ಕೊಲ್ಲದಂತೆ ವ್ಯವಸ್ಥೆಯಿಡುವುದು ಈತನ ಕೆಲಸ. ಕಟಿಕ ಜನರ ಮೇಲ್ವಿಚಾರಣೆಯನ್ನು ಮಾಡುವುದೂ ಈತನ ಕೆಲಸ. (೫) ಲೋಹಾಧ್ಯಕ್ಷ- ಕಡಿಮೆ ತರಹದ ಧಾತುಗಳ ಮೇಲಿನ ಅಧಿಕಾರಿ. (೬) ಲಕ್ಷಣಾಧ್ಯಕ್ಷ- ತಾಮ್ರದ ನಾಣ್ಯಗಳನ್ನು ಮಾಡುವ ಅಧಿಕಾರಿ. (೭) ಸುವರ್ಣಾಧ್ಯಕ್ಷ- ಆಭರಣಗಳನ್ನು ಮಾಡಿಸುವ ಮತ್ತು ಬಂಗಾರದ ಮತ್ತು ಬೆಳ್ಳಿಯ ನಾಣ್ಯಗಳನ್ನು ಮಾಡುವ ಸೌವರ್ಣಿಕ ಎಂಬವನ ಮೇಲ್ವಿಚಾರಣೆಯನ್ನು ಮಾಡುವ ಅಧಿಕಾರಿ. (೮) ಖನ್ಯಧ್ಯಕ್ಷ- ಮುತ್ತುಹವಳಾದಿಗಳನ್ನು ಕೊರೆದು ಮಾರಲಿಕ್ಕೆ ಸಿದ್ಧಪಡಿಸುವ ಅಧಿಕಾರಿ. (೯) ಲವಣಾಧ್ಯಕ್ಷ- ಉಪ್ಪಿನ ಮೇಲಿನ ಅಧಿಕಾರಿ. (೧೦) ಸೂತ್ರಾಧ್ಯಕ್ಷ- ನೇಯಗಿಯ ಶಾಖೆಯ ಮೇಲಿನ ಅಧಿಕಾರಿ. (೧೧) ಗಣಿಕಾಧ್ಯಕ್ಷ- ಅರಸನ ದಾಸಿಯರ ಮೇಲಿನ ಅಧಿಕಾರಿ. ಅವರ ಗೃಹಕೃತ್ಯದ ವ್ಯವಸ್ಥೆ ನೋಡುವುದು, ರಜೆ ಕೊಡುವುದು, ವರ್ಗ ಮಾಡುವುದು ಇವೇ ಮುಂತಾದ ಕೆಲಸಗಳು ಈತನ ಕಡೆಗೆ ಇದ್ದವು. ಗಣಿಕಾ ಜನರ ಮೇಲ್ವಿಚಾರಣೆಯೂ ಈತನ ಕಡೆಗೇ ಇತ್ತು. ಅವರಿಗೂ ಅವರ ಮಕ್ಕಳಿಗೂ ಸಂಗೀತ ನೃತ್ಯ ಮುಂತಾದ ವಿದ್ಯೆಗಳನ್ನು ಕಲಿಸುವುದು, ಚಿತ್ರಕಲೆಯ ಶಾಲೆಗಳನ್ನಿಡುವುದು, ಗುಪ್ತದೂತರ ಕೆಲಸಗಳನ್ನು ಮಾಡುವ ವಿದ್ಯೆಯಲ್ಲಿ ಅವರನ್ನು ನಿಪುಣರನ್ನಾಗಿ

ಮಾಡುವುದು ಇವು ಈತನ ಕೆಲಸಗಳು. ಈತನು ಸಮಾಹರ್ತನ ಕೈಯಲ್ಲಿಯ ಅಧಿಕಾರಿ. (೧೨) ನಾವಾಧ್ಯಕ್ಷ– ನಾವೆ ಮತ್ತು ಹಡಗುಗಳ ಸುಂಕವನ್ನು ವಸೂಲ ಮಾಡುವುದು. ಸಮುದ್ರ ದಂಡೆಯ ಮೇಲೆ ವಾಸಿಸುವ ಜನರಿಂದ ಸರಕಾರಕ್ಕೆ ಸಲ್ಲತಕ್ಕ ಕರಗಳನ್ನು ವಸೂಲ ಮಾಡುವುದು, ಬಂದರಗಳಲ್ಲಿಯ ಶುಲ್ಕವನ್ನು ವಸೂಲ ಮಾಡುವುದು, ಯಾತ್ರಾವೇತನವನ್ನು ಅಂದರೆ ಅರಸನ ಹಡಗಗಳಲ್ಲಿ ಪ್ರವಾಸ ಮಾಡುವವರಿಂದ ಬರತಕ್ಕ ಹಣವನ್ನು ವಸೂಲ ಮಾಡುವುದು, ಇವೇ ಮುಂತಾದವು ಈತನ ಕೆಲಸಗಳು. (೧೩) ಗೊ–ಅಶ್ವ–ಇವುಗಳ ಅಧ್ಯಕ್ಷನಿಗೂ ವಿವೀತಾಧ್ಯಕ್ಷ– ಅಂದರೆ ಹುಲ ಬನ್ನಿ ಭೂಮಿಗಳ ಮೇಲಿನ ಅಧಿಕಾರಿಗೂ ಸಂಬಂಧವಿತ್ತು. ಈ ಶಾಖೆಯವರು ಲಷ್ಕರಿ ಶಾಖೆಗೆ ಬೇಕಾಗುವ ಕುದುರೆ ಎತ್ತು ಮುಂತಾದವುಗಳನ್ನು ಪೂರೈಸುತ್ತಿದ್ದರು. (೧೪) ಹಸ್ತ್ಯಧ್ಯಕ್ಷ– ಈತನೂ ನಾಗವನಾಧ್ಯಕ್ಷ ಅಂದರೆ ಆನೆಗಳನ್ನು ಹಿಡಿಯುವ ಅಧಿಕಾರಿಯೂ ಕೂಡಿ ಆನೆಗಳನ್ನು ಸಂರಕ್ಷಿಸುವುದು, ಪೂರೈಸುವುದು ಇವೇ ಮುಂತಾದ ಕೆಲಸಗಳನ್ನು ಮಾಡುತ್ತಿದ್ದರು. (೧೫) ರಥಾಧ್ಯಕ್ಷ ಇದೂ ಒಂದು ಮಹತ್ವದ ಶಾಖೆಯಾಗಿತ್ತು. ಸೈನಿಕರಿಗೆ ಶಿಕ್ಷಣ ಕೊಡುವುದು. ಕುದುರೆ ರಥ ಮುಂತಾದವುಗಳನ್ನು ನಡಿಸುವುದು, ಇವೇ ಮುಂತಾದ ಯಾವತ್ತು ಲಷ್ಕರಿ ಶಿಕ್ಷಣದ ವ್ಯವಸ್ಥೆಯು ಈ ಅಧಿಕಾರಿಯ ಕಡೆಗೆ ಇರುತ್ತಿತ್ತು. (೧೬) ಪತ್ಯಧ್ಯಕ್ಷ– ಕಾಲುದಳದ ಮೇಲಿನ ಮುಖ್ಯ ಅಧಿಕಾರಿ. ಗೋ, ಅಶ್ವ, ರಥ, ಹಸ್ತಿ ಇವೇ ಮುಂತಾದ ಶಾಖೆಗಳ ಅಧಿಕಾರಿಗಳು ಅರ್ಥಾತ್ ಸೇನಾಪತಿಯ ಕೈಯಲ್ಲಿ ಕೆಲಸ ಮಾಡತಕ್ಕದ್ದು. (೧೭) ಮುದ್ರಾಧ್ಯಕ್ಷ– ದೇಶದ ಹೊರಗೆ ಮತ್ತು ಒಳಗೆ ಹೋಗಬರುವವರಿಗೆ ಪರವಾನಿಗೆಗಳನ್ನು ಕೊಡುವುದು. (೧೮) ನಾಗರಕ– ಈತನು ಪಟ್ಟಣದ ಮುಖ್ಯ ಅಧಿಕಾರಿ. ಜನಗಣನೆ, ಭೂಮಿಯ ಅಳತಿ ಮುಂತಾದವುಗಳನ್ನು ಮಾಡುವುದು ಈತನ ಕೆಲಸ. ಇದರ ಸಲುವಾಗಿ ಪಟ್ಟಣವಲ್ಲಿ ನಾಲ್ಕು ವಿಭಾಗಗಳು ಮಾಡಲ್ಪಡುತ್ತಿದ್ದವು. ಮತ್ತು ಆಯಾ ಭಾಗಗಳ ಮೇಲೆ ಒಬ್ಬ ಸ್ಥಾನಿಕನೆಂಬ ಅಧಿಕಾರಿ

ಯಿರುತ್ತಿದ್ದನು. ಸ್ಥಾನಿಕನ ಕೈಕೆಳಗೆ 'ಗೋಪ' ನೆಂಬ ಅಧಿಕಾರಿ ಇರುತ್ತಿದ್ದನು. ಆಯಾ ಭಾಗಗಳಲ್ಲಿರುವ ಮನೆಗಳ ಸಂಬಂಧದಿಂದ ಸರಕಾರಕ್ಕೆ ಬರತಕ್ಕ ಹಣವನ್ನು ವಸೂಲು ಮಾಡುವುದೇ ಮುಂತಾದವುಗಳು ಆತನ ಕೆಲಸಗಳು. ಮನೆಗಳಿಗೆ ಬೆಂಕಿ ತಗಲದಂತೆ ಪ್ರತಿಯೊಂದು ಮನೆಯವರು ಕೆಲವು ಎಚ್ಚರಿಕೆಗಳನ್ನು ತೆಗೆದುಕೊಳ್ಳಲೇಬೇಕಾಗುತ್ತಿತ್ತು. ಅಲ್ಲದೆ, ಬೆಂಕಿ ತಗಲಿದರೆ ಅದನ್ನು ನೊಂದಿಸುವುದು ಈ ಅಧಿಕಾರಿಯ ಕೆಲಸ. ಪಟ್ಟಣದಲ್ಲಿ ದಂಗೆ ಮುಂತಾದವುಗಳು ಆಗದಂತೆಯೂ, ಪಟ್ಟಣದ ಆರೋಗ್ಯವು ಕೆಡದಂತೆಯೂ ಮಾಡುವುದು ಈತನ ಕೆಲಸ. ಕಳವು ದರೋಡೆಗಳು ಆಗದಂತೆ ವ್ಯವಸ್ಥೆಯಿಡುವುದು ಈತನ ಕೆಲಸ.

ಮೇಲೆ ಕೊಟ್ಟ ವಿವರಗಳಿಂದ ಆಗಿನ ಕಾಲದಲ್ಲಿ ಸರಕಾರದವರು ಪ್ರಜೆಗಳ ಹಿತಕ್ಕೆ ಅವಶ್ಯವಿರುವ ಪ್ರತಿಯೊಂದು ಮಾತಿನ ಕಡೆಗೂ ಹೇಗೆ ಲಕ್ಷ್ಯ ಪೂರೈಸುತ್ತಿದ್ದರೆಂಬುದು ವಿದಿತವಾಗುವುದು.

---

## ೧೦ನೆಯ ಪ್ರಕರಣ

## ಮಂತ್ರಿಮಂಡಳ

ಮಂತ್ರವೆಂದರೆ ಯೋಜನೆ, ಉಪಾಯ, ಕೃತ್ಯ. ಚರ್ಚೆ ಮಾಡಿ ಯಾವ ಉಪಾಯವು ಸರಿಯಾದುದೆಂಬುದನ್ನು ನಿಶ್ಚಯಿಸತಕ್ಕದ್ದಿರುತ್ತದೆ. ಯಾವನ ಸಹಾಯದಿಂದ ಹೀಗೆ ಮಾಡಲ್ಪಡುತ್ತದೋ ಆತನು ಮಂತ್ರಿ. ಮಂತ್ರಕ್ಕೆ ಐದು ಅಂಗಗಳಿರುತ್ತವೆಂದು ಹಿಂದೂ ರಾಜನೀತಿಕಾರರ ಮತವು. ಆ ಅಂಗಗಳು ಯಾವುವೆಂದರೆ (೧) ಯಾವುದೊಂದು ಕಾರ್ಯವನ್ನು ಪ್ರಾರಂಭಿಸುವ ಮುಂಚೆ ಅದರ ಸಾಧನಗಳನ್ನು ನಿರ್ಣಯಿಸುವುದು. (೨) ಆ ಕಾರ್ಯಕ್ಕೋಸ್ಕರ ಬೇಕಾಗುವ ಜನರು ಮತ್ತು ಸಾಮುಗ್ರಿ ಇವುಗಳ ಸಂಗ್ರಹವನ್ನು ಹೇಗೆ ಮಾಡಬೇಕೆಂಬುದನ್ನು ನಿಶ್ಚಯಿಸುವುದು. (೩) ಅರಸನೂ ಆತನ

ಮಂತ್ರಿಮಂಡಳವೂ ಆ ಕಾರ್ಯದ ಸ್ಥಳ ಮತ್ತು ಕಾಲಗಳನ್ನು ನಿರ್ಣಯಿಸುವುದು. (೪) ಆ ಕಾರ್ಯಕ್ಕೊದಗಬಹುದಾದ ದೈವೀ ಅಥವಾ ಮಾನುಷ ವಿಪತ್ತುಗಳನ್ನು ಕುರಿತು ಯೋಚಿಸುವುದು. (೫) ಆ ಕಾರ್ಯದ ಪರಿಣಾಮವನ್ನು ತಿಳಿದುಕೊಳ್ಳುವುದು. ಅಂದರೆ ಆದರಿಂದ ಪ್ರಗತಿಯಾಗುತ್ತದೆಯೋ ಸ್ಥಿರತೆಯುಂಟಾಗುತ್ತದೆಯೋ ಅಥವಾ ಅಪಕರ್ಷವಾಗುತ್ತದೆಯೋ ಎಂಬುದನ್ನು ತಿಳಿದುಕೊಳ್ಳುವುದು. ಮಂತ್ರಿಗಳು ಪ್ರತಿಯೊಂದು ಕಾರ್ಯದ ವಿಚಾರವನ್ನು ಈ ಐದು ದೃಷ್ಟಿಯಿಂದ ಮಾಡಬೇಕು.

ರಾಮಾಯಣ, § ಶುಕ್ರನೀತಿ * ಮತ್ತು ಪಾಲೀ ಗ್ರಂಥಗಳಲ್ಲಿ ಮಂತ್ರಿಗಳಲ್ಲಿ ಮೂರು ವರ್ಗಗಳು ಮಾಡಲ್ಪಟ್ಟಿವೆ. (೧) ಮುಖ್ಯ (೨) ಮಧ್ಯಮ (೩) ಜಘನ್ಯ ಮತ್ತು ಅರ್ಥಶಾಸ್ತ್ರದಲ್ಲಿ ೧೮ ತೀರ್ಥರು (ಅಧಿಕಾರಿ)ಗಳಲ್ಲಿ ಮೂರೇ ವಿಭಾಗಗಳು ಮಾಡಲ್ಪಟ್ಟಿವೆ. (೧) ಮುಖ್ಯ ಮಂತ್ರಿ, ಪುರೋಹಿತ, ಸೇನಾಪತಿ, ಯುವರಾಜ. (೨) ದೌವಾರಿಕ, ಅಂತರ್ವಂಶಿಕ, ಪ್ರಶಸ್ತಾ, ಸಮಾಹರ್ತಾ, ಸನ್ನಿಧಾತಾ. (೩) ಪ್ರದೇಷ್ಟಾನನ್ನು ಹೊರ್ತು ಪಡಿಸಿ ಮಿಕ್ಕವರೆಲ್ಲರೂ ಮೊದಲಿನ ವರ್ಗದೊಳಗಿನ ಪ್ರತಿಯೊಬ್ಬ ತೀರ್ಥರಿಗೆ ವರ್ಷಕ್ಕೆ ೪೮೦೦೦ ಬೆಳ್ಳಿಯ ಪಣಗಳ ಸಂಬಳವಿತ್ತು. ರಾಜಮಾತೆಗೂ ಮುಖ್ಯ ರಾಣಿಗೂ ಕೂಡ ಅಷ್ಟೇ ಸಂಬಳ. ಋತ್ವಿಕ ಮತ್ತು ಆಚಾರ್ಯ (ರಾಜಗುರು) ಇವರಿಗೂ ಅಷ್ಟೇ ಸಂಬಳ. ರಾಜನಿಗೆ ಇದರ ಮೂರು ಪಟ್ಟು ಅಂದರೆ ೧೨೪೦೦೦ ಪಣ ಸಂಬಳವಿತ್ತು. ಎರಡನೆಯ ವರ್ಗದ ಮಂತ್ರಿಗಳಿಗೆ ಪ್ರತಿಯೊಬ್ಬನಿಗೆ ವರ್ಷಕ್ಕೆ ೨೪೦೦೦ ಬೆಳ್ಳಿಯ ಪಣಗಳು, ಮೂರನೆಯ ವರ್ಗದ ಮಂತ್ರಿಗಳಿಗೆ ಪ್ರತಿಯೊಬ್ಬನಿಗೆ ೧೨೦೦೦ ರೌಪ್ಯಪಣ ಸಂಬಳ ಸಿಗುತ್ತಿತ್ತು. ಹಾಗೆಯೆ ರಾಜಪುತ್ರನಿಗೂ ರಾಜನ ಇತರ ರಾಣಿಗಳಿಗೂ ಪ್ರತಿಯೊಬ್ಬರಿಗೆ ೧೨೦೦೦ ಪಣ ಸಂಬಳ ದೊರೆಯುತ್ತಿತ್ತು.

---

§ ರಾಮಾಯಣ. ಅಯೋಧ್ಯಾ. ಅ. ೧೦೦. ಶ್ಲೋ. ೨೫–೨೬

* ಶುಕ್ರ ನೀತಿಸಾರ. ಅ. ೨ ಶ್ಲೋ. ೧೦೯–೧೧೦

ಈ ಜನರು ತಮ್ಮ ಕಾರ್ಯಗಳನ್ನು ಉತ್ತಮವಾಗಿ ಜರುಗಿಸಿದರೆ ಸಂಬಳವಲ್ಲದೆ ಕೆಲವು ಭೂಮಿಗಳು ಇನಾಮಾಗಿ ದೊರೆಯುತ್ತಿದ್ದವು.

ಅಮಾತ್ಯ, ಸಚಿವ ಮತ್ತು ಮಂತ್ರಿ ಈ ಶಬ್ದಗಳಿಗೆ ಮೊದಲು ಹೇಳಿರುವ ಬೇರೆ ಬೇರೆ ಅರ್ಥಗಳಿದ್ದರೂ ಮುಂದೆ ಅವೆಲ್ಲವೂ ಒಂದೇ ಅರ್ಥದಲ್ಲಿ ಉಪಯೋಗಿಸಲ್ಪಡಹತ್ತಿದವು. ಮಂತ್ರಿಮಂಡಳದಲ್ಲಿ ಮುಖ್ಯ ಎರಡು ಭಾಗಗಳಿದ್ದವು. (೧) ಒಳಮಂಡಳ (Inner Cabinet). (೨) ಹೊರಮಂಡಳ (Outer Cabinet). ಒಳಮಂಡಳದ ಸದಸ್ಯರಿಗೆ ಮಂತ್ರಿಗಳೆಂದೂ ಹೊರಮಂಡಳದ ಸದಸ್ಯರಿಗೆ ಅಮಾತ್ಯರೆಂದೂ ಕೂಡ ಕರೆಯುತ್ತಿದ್ದರು. ಅರಸನು ಒಳಮಂಡಳದ ಮಂತ್ರಿಗಳೊಡನೆ ಆಪ್ತಾಲೋಚನೆಯನ್ನು ಮಾಡಿ ಯಾವುದೊಂದು ಯೋಜನೆಯನ್ನು ನಿಶ್ಚಯಿಸಿದನಂತರ ಅದನ್ನು ಅಮಲಿನಲ್ಲಿ ತರುವುದಕ್ಕೋಸ್ಕರ ಅದು ಮಂತ್ರಿಪರಿಷಿತ್ ಅಥವಾ ಅಮಾತ್ಯಪರಿಷತ್ತಿನ ಕಡೆಗೆ ಬರುತ್ತಿತ್ತು. ಅರಸನು ಯಾವ ರಾಜಕೀಯ ಸಂಗತಿಗಳ ವಿಷಯವಾಗಿ ತನ್ನ ಸಚಿವರ ಸಲಹೆಗಳನ್ನು ತೆಗೆದುಕೊಳ್ಳಬೇಕೆಂಬ ವಿಷಯವಾಗಿ ಮನುವು ಹೇಳುವುದೇನೆಂದರೆ:—

**ತೈಃ ಸಾರ್ಧಂ ಚಿಂತಯೇನ್ನಿತ್ಯಂ ಸಾಮಾನ್ಯಂ ಸಂಧಿ**
**ವಿಗ್ರಹಂ ।**
**ಸ್ಥಾನಂ ಸಮುದಯಂ ಗುಪ್ತಿಂ ಲಬ್ಧಪ್ರಶಮನಾನಿ ಚ ॥೫೬॥**

**ತೇಷಾಂ ಸ್ವಂ ಸ್ವಮಭಿಪ್ರಾಯಮುಪಲಭ್ಯ ಪೃಥಕ್**
**ಪೃಥಕ್ ।**
**ಸಮಸ್ತಾನಾಂಚ ಕಾರ್ಯೇಷು ವಿದಧ್ಯಾದ್ಧಿತಮಾತ್ಮನಃ ॥೫೭॥**

(೧) ಯುದ್ಧ ಮತ್ತು ಸಂಧಿ. (೨) ಸೈನ್ಯದ ಸಾಮರ್ಥ್ಯ, ದಂಡ, ಕೋಶ, ಪುರ ಮತ್ತು ರಾಷ್ಟ್ರಾತ್ಮಕವಾದ ಚತುರ್ವಿಧ ಸಾಮರ್ಥ್ಯ. (೩) ರಾಜ್ಯದ ವಸೂಲಿಯ ಬೆಳವಣಿಗೆ. (೪) ಪ್ರಜೆಗಳ ಸಂರಕ್ಷಣ. (೫) ರಾಷ್ಟ್ರೀಯ ಹಣದ ವಿನಿಯೋಗವನ್ನು ರಾಷ್ಟ್ರದ ಹಿತಕ್ಕೋಸ್ಕರ

ಮಾಡುವುದು– ಈ ವಿಷಯಗಳ ಬಗ್ಗೆ ಅರಸನು ಮಂತ್ರಿಗಳ ಸಲಹೆಯನ್ನು ತೆಗೆದುಕೊಳ್ಳತಕ್ಕದ್ದು.

ಈ ತರಹದ ಮಂತ್ರಿಮಂಡಳದ ಮೂಲವು ವೈದಿಕ ಕಾಲದ ಸಮಿತಿಗಳಲ್ಲಿ ಇರುತ್ತದೆ. ಸಮಿತಿಗಳೆಂದರೆ ಸಾರ್ವಜನಿಕ ಸಂಸ್ಥೆಗಳೆಂದು ಹಿಂದೆಹೇಳಿಯೇ ಇರುವೆವು. ಆ ಸಮಿತಿಗಳೊಳಗಿಂದಲೇ ಈ ಮಂತ್ರಿಮಂಡಳವು ಹೊರಬಿದ್ದ ಭಾಗವು. ಅದು ಹೇಗೆಂಬುದನ್ನು ಇಲ್ಲಿ ವಿವರಿಸುತ್ತೇವೆ. ಅಥರ್ವವೇದದಲ್ಲಿ, ರಾಜಕರ್ತರು (King makers) ಎಂಬವರು ಜನತೆಯ ಪ್ರತಿನಿಧಿಗಳು. ಅವರು ರಾಜನಲ್ಲಿ ರಾಜತ್ವವನ್ನು ಅಥವಾ ರಾಜಾಧಿಪತ್ಯ (Sovereignty) ಅರ್ಪಿಸುತ್ತಿದ್ದರು. ಈ ರಾಜಕರ್ತರೇ ಮುಂದೆ ಮುಂದೆ ರತ್ನಿಗಳು ಎಂಬ ಹೆಸರಿನಿಂದ ಪ್ರಸಿದ್ಧರಾದರು. ಈ ರತ್ನಿಗಳು ಸರಕಾರದ ಅಧಿಕಾರಿಗಳು. ರಾಜನು ಪಟ್ಟವೇರುವ ಮುಂಚೆ ಅವನು ಈ ರತ್ನಿಗಳನ್ನು ಪೂಜಿಸಬೇಕಾಗುತ್ತಿತ್ತು; ಅಂದರೆ ವೈದಿಕ ಕಾಲದ ರಾಜಕರ್ತರಲ್ಲಿದ್ದ ಜನತೆಯ ಪ್ರತಿನಿಧಿಗಳೆಂಬ ಗೌರವವೂ ಅವರಿಗಿತ್ತು; ಅಲ್ಲದೆ, ಅವರು ಸರಕಾರದ ದೊಡ್ಡ ನವಕರರೆಂದೂ ಗಣಿಸಲ್ಪಡುತ್ತಿದ್ದರು. ಆದರೆ ಅವರು ಅರಸನ ನವಕರರಾಗಿದ್ದಿಲ್ಲ, ಜನತೆಯ ನವಕರರು. ಮಂತ್ರಿಮಂಡಳಕ್ಕೆ ಅರ್ಥಶಾಸ್ತ್ರದಲ್ಲಿ ಪರಿಷತ್ತು ಎಂದೂ ಬುದ್ಧಜಾತಕಗಳಲ್ಲಿ ಪರಿಸಾ ಎಂದೂ ಹೆಸರಿದೆ. ಅಂದರೆ ಪರಿಷತ್ತು ಎಂಬುದು ವೈದಿಕ ಕಾಲದ ಸಮಿತಿಗಳಿಗೆ ಸಮಾನವಾದ ಸಂಸ್ಥೆಯೆಂದು ಹೇಳಬಹುದು. ಬೃಹದಾರಣ್ಯಕೋಪನಿಷತ್ತಿನಲ್ಲಿ ಸಮಿತಿಗೆ ಪರಿಷತ್ತು ಎಂದೂ ಹೆಸರು ಕೊಡಲ್ಪಟ್ಟಿದೆ. ಹೀಗೆ ಮಂತ್ರಿವರ್ಗವು ಸಮಿತಿಯಿಂದ ಹುಟ್ಟಿದ ಸಂಸ್ಥೆಯು. ಎಂಥ ಬಲಿಷ್ಠ ರಾಜನ ಕಾಲದಲ್ಲಿಯೂ, ಮುಖ್ಯತಃ ಜನತೆಗೆ ತಾನು ಹೊಣೆಗಾರನೆಂಬ ಕಲ್ಪನೆಯನ್ನು ಮಂತ್ರಿವರ್ಗವು ಮರೆತಿರಲಿಲ್ಲ. ಪಾಲೀ ಸೂತ್ರಗಳಲ್ಲಿಯೂ ರಾಮಾಯಣದಲ್ಲಿಯೂ ಈ ಮಂತ್ರಿಗಳಿಗೆ ರಾಜಕೃತಃ (King makers) ಎಂಬ ಹೆಸರು ದೊರೆಯುತ್ತದೆ. ಸಾರಾಂಶ– ಇವರು ಅರಸನ ನವಕರರಲ್ಲ, ಜನತೆಗೆ ಹೊಣೆಗಾರರು.

ಈ ಮಂತ್ರಿ ಪರಿಷತ್ತಿನ ಸಲಹೆ ಮತ್ತು ಸಹಾಯಗಳನ್ನು ತೆಗೆದುಕೊಳ್ಳದೆ ಯಾವ ಕಾರ್ಯವನ್ನು ಮಾಡುವುದಕ್ಕೂ ರಾಜನಿಗೆ ಅಧಿಕಾರವಿದ್ದಿಲ್ಲ. ಸಕಲ ಧರ್ಮಶಾಸ್ತ್ರಗಳಿಗೂ ರಾಜನೀತಿ ಶಾಸ್ತ್ರಗಳಿಗೂ ಮನು, ಯಾಜ್ಞವಲ್ಕ್ಯ ಕಾತ್ಯಾಯನ ಮುಂತಾದ ಸ್ಮೃತಿಗಳಿಗೂ ಈ ತತ್ವವು ಮಾನ್ಯವಿದೆ. ಕೌಟಿಲ್ಯನು ರಾಜನ ಕಡುತರವಾದ ಪಕ್ಷಪಾತಿಯಷ್ಟೆ. ಆತನಿಗೂ ಕೂಡ, ಅರಸನು ಮಂತ್ರಿ ಪರಿಷತ್ತಿನ ಸಲಹೆಯಿಲ್ಲದೆ ಯಾವ ಕಾರ್ಯವನ್ನೂ ಮಾಡಕೂಡದೆಂಬ ತತ್ವವು ಮಾನ್ಯವಿದೆ. ಮಂತ್ರಿ ಪರಿಷತ್ತಿನವರು ಬಹುಮತದಿಂದ ನಿರ್ಣಯಿಸಿದಂತೆ ಮಾಡುವುದು ರಾಜನ ಕರ್ತವ್ಯ. ಮಂತ್ರಿ ಪರಿಷತ್ತಿನ ಹೊರ್ತಾಗಿ ಅರಸನ ಸಹಾಯಕ್ಕೆ ಮಂತ್ರಿಮಂಡಳವೊಂದು ಇದ್ದಾಗ್ಯೂ ಕೂಡ, ಅರಸನು ಮಂತ್ರಿ ಪರಿಷತ್ತಿನ ಹೇಳಿಕೆಯಂತೆಯೇ ನಡೆಯಬೇಕೆಂದು ನಿರ್ಬಂಧವಿತ್ತು. ಆಗಿನ ಕಾಲದಲ್ಲಿ ರಾಜನಿಗೆ ನಿಷೇಧಕ ಸ್ವಾತಂತ್ರ್ಯ ಅಥವಾ ಪ್ರತ್ಯಾಖ್ಯಾನ (Veto) ದ ಅಧಿಕಾರವಿದ್ದಿಲ್ಲವೆಂಬುದು ನೆನಪಿನಲ್ಲಿಡತಕ್ಕ ಸಂಗತಿಯಾಗಿದೆ. ಅಂದರೆ, ಮಂತ್ರಿ ಪರಿಷತ್ತಿನವರು ನಿರ್ಣಯಿಸಿದುದಕ್ಕೆ "ಹಾಗೆ ಆಗಕೂಡದು" ಎಂದೆನ್ನುವುದಕ್ಕೆ ಅರಸನಿಗೆ ಅಧಿಕಾರವಿದ್ದಿಲ್ಲ. ಪರಿಷತ್ತಿನವರು ಬೇಡವೆಂದರೆ ಬ್ರಾಹ್ಮಣರಿಗೆ ದಾನ ಕೊಡುವ ಅಧಿಕಾರವು ಕೂಡ ಅವನಿಗೆ ಇರಲಿಲ್ಲ.

ಮಂತ್ರಿಮಂಡಳ (Cabinet) ದಲ್ಲಿ ಮತ್ತು ಮಂತ್ರಿಪರಿಷತ್ತಿ (Council of ministers) ನಲ್ಲಿ ಎಷ್ಟು ಜನರಿರುತ್ತಿದ್ದರೆಂಬುದನ್ನು ಕೆಳಗೆ ಕೊಟ್ಟಿದೆ.

| | ಮಂತ್ರಿಮಂಡಳ | ಮಂತ್ರಿಪರಿಷತ್ತು |
|---|---|---|
| ಬೃಹಸ್ಪತಿ | ........ | ೧೬ |
| ಮನು | ೭ ಅಥವಾ ೮ | ೧೨ |
| ಉಶನಸ | ........ | ೨೦ |
| ಪ್ರಾಚೀನ ಕಾಲದಲ್ಲಿ | ........ | ೩೨ |
| ಶುಕ್ರನೀತಿ | ೮ | .... |

| | | |
|---|---|---|
| ಮಹಾಭಾರತ | ೩ ಅಥವಾ ೫ | .... |
| ಕೌಟಿಲ್ಯ | ೩ ಅಥವಾ ೪ | .... |

ಶುಕ್ರನೀತಿಯಲ್ಲಿ ಈ ಎಂಟು ಪ್ರಕೃತಿಗಳ (ಮಂತ್ರಿಗಳ) ಹೆಸರುಗಳು ಹೀಗೆ ಕೊಡಲ್ಪಟ್ಟಿವೆ. (೧) ಸುಮಂತ್ರ–ಜಮಾಬಂದೀಖಾತೆಯ ಪ್ರಧಾನ (೨) ಪಂಡಿತ–ನ್ಯಾಯಖಾತೆಯ ಪ್ರಧಾನ (೩) ಮಂತ್ರಿ–Home minister (೪) ಪ್ರಧಾನ–ಮಂತ್ರಿ ಪರಿಷತ್ತಿನ ಅಧ್ಯಕ್ಷ (೫) ಸಚಿವ–ಯುದ್ಧಖಾತೆಯ ಪ್ರಧಾನ (೬) ಅಮಾತ್ಯ–ಒಕ್ಕಲತನ ಮತ್ತು ಮುಲ್ಕಿ ಖಾತೆಯ ಪ್ರಧಾನ (೭) ಪ್ರಾಡ್-ವಿವಾಕ್–ನ್ಯಾಯ ಖಾತೆಯ ಪ್ರಧಾನ (೮) ಪ್ರತಿನಿಧಿ–ರಾಜನ ಪರವಾಗಿ ಕೆಲಸ ಮಾಡುವ ಪ್ರಧಾನ (೯) ಪುರೋಹಿತ–ಧರ್ಮಾಧಿಕಾರದ ಪ್ರಧಾನ (೧೦) ದೂತ–ಪರರಾಷ್ಟ್ರಗಳ ಕಾರಸ್ಥಾನಕ್ಕೋಸ್ಕರ ಕಳುಹಿಸಿದ ಪ್ರಧಾನ. ಎಲ್ಲರಿಗೂ ಸಮಾನ ಸಂಬಳ.

ಇವರಲ್ಲಿ ಪುರೋಹಿತನು ಎಲ್ಲಕ್ಕೂ ಶ್ರೇಷ್ಠನು. ಅಲ್ಲಿಂದ ಅನುಕ್ರಮವಾಗಿ ಪ್ರತಿನಿಧಿ, ಪ್ರಧಾನ, ಸಚಿವ, ಮಂತ್ರಿ, ಪ್ರಾಡ್ ವಿವಾಕ್, ಪಂಡಿತ, ಸುಮಂತ್ರ, ಅಮಾತ್ಯ ಮತ್ತು ಕೊನೆಗೆ ದೂತ ಹೀಗೆ ಇವರ ಸ್ಥಾನಗಳಿದ್ದವು.* ಪುರೋಹಿತ ಮತ್ತು ದೂತ ಇವರಿಬ್ಬರಿಗೆ ಮಂತ್ರಿಪರಿಷತ್ತಿನಲ್ಲಿ ಸ್ಥಾನಗಳಿದ್ದರೂ, ಅಷ್ಟಪ್ರಧಾನರಲ್ಲಿ ಅವರು ಎಣಿಸಲ್ಪಟ್ಟಿರುವುದಿಲ್ಲ. ಯುವರಾಜನೂ ಮಂತ್ರಿವರ್ಗದವನೊಬ್ಬನಾಗಿದ್ದರೂ ಆತನಿಗೆ ಮಂತ್ರಿಮಂಡಳದಲ್ಲಿ ಸ್ಥಳವಿಲ್ಲ. ಈ ಮಂತ್ರಿಮಂಡಳಕ್ಕೆ ಮಹಾಭಾರತ ಮತ್ತು ಶುಕ್ರನೀತಿಗಳಲ್ಲಿ ಗಣ, ಎಂದು ಹೆಸರಿದೆ. ಈ ಮಂತ್ರಿಮಂಡಳದೊಳಗಿನ ಒಳಮಂಡಳದಲ್ಲಿ ೩–೪ ಜನ ಮಂತ್ರಿಗಳಿರುತ್ತಿದ್ದರು. ಅವರಿಗೆ ಮಂತ್ರಧರ ಅಥವಾ ಮಂತ್ರಗ್ರಾಹರೆಂದು ಹೆಸರು.

**ಮಂತ್ರಿಪರಿಷತ್ತಿನ ಘಟನೆ:–** ಈ ಪರಿಷತ್ತಿನಲ್ಲಿ ಮಂತ್ರಿಗಳಷ್ಟೆ ಇರುತ್ತಿರಲಿಲ್ಲ. ಮಂತ್ರಧರರು ಈ ಪರಿಷತ್ತಿನ ಸಭೆಗಳಿಗೆ

* ಶುಕ್ರನೀತಿ ೨ ಅ. ೮೪–೮೭; ೭೪-೭೫

ಬರುತ್ತಿದ್ದರು. ಈ ಮಂತ್ರಿಪರಿಷತ್ತಿನಲ್ಲಿಯ ಸದಸ್ಯರು ಯಾರು ಯಾರೆಂದರೆ: (೧) ಮಂತ್ರಧರರು-(Inner Cabinet) (೨) ಭಿನ್ನ ಭಿನ್ನ ಖಾತೆಗಳ ಮಿಕ್ಕ ಮಂತ್ರಿಗಳು (೩) ಯಾವ ಮಂತ್ರಿಗಳ ಕಡೆಗೆ ಏನೂ ಖಾತೆಗಳು ಒಪ್ಪಿಸಲ್ಪಟ್ಟದ್ದಿಲ್ಲವೋ ಅಂಥ ಕೆಲವು ಮಂತ್ರಿಗಳು (೪) ಅಲ್ಲದೆ ಮಿಕ್ಕವರು. ಈ ಮಿಕ್ಕವರೆಂದರೆ ಯಾರು ಎಂಬದು ನಮಗೆ ಗೊತ್ತಿಲ್ಲ. ಅಶೋಕನು ಕರೆದ ಮಂತ್ರಿ ಪರಿಷತ್ತಿನ ವಿವರಗಳ ಮೇಲಿಂದ ಈ ಮಿಕ್ಕವರೆಂದರೆ ಪೌರ ಮತ್ತು ಜಾನಪದ ಸಂಸ್ಥೆಗಳ ಮುಖಂಡರೆಂದು ಊಹಿಸಬಹುದು. ಮಹಾಭಾರತದಿಂದಲೂ ಇದೇ ತರಹದ ಊಹೆಯು ಹೊರಡುತ್ತದೆ. ಶುಕ್ರನೀತಿಯ ಮೇರೆಗೆ ಈ ಮಂತ್ರಿಪರಿಷತ್ತಿನಲ್ಲಿ (೧) ಸಭ್ಯ-ಅಂದರೆ ಮಂತ್ರಿಪರಿಷತ್ತಿನ ಅಧ್ಯಕ್ಷ (೨) ಅಧಿಕಾರಿ-ಆಯಾ ಖಾತೆಗಳ ಮುಖ್ಯಸ್ಥರು (೩) ಪ್ರಕೃತಿ-ಅಂದರೆ ಪ್ರಜೆಗಳು ಅಥವಾ ಪೌರ ಮತ್ತು ಜಾನಪದ ಸಂಸ್ಥೆಗಳ ಮುಖಂಡರು ಇರುತ್ತಿದ್ದರು. ಮಹಾಭಾರತದ ಮೇರೆಗೆ ಈ ಪರಿಷತ್ತಿನಲ್ಲಿ (೧) ಸಹಾಯ-ಅಂದರೆ ಮಂತ್ರಿಗಳು (೨) ಪರಿಚ್ಛದ ಅಮಾತ್ಯರು-ಅಂದರೆ ಆಯಾ ಖಾತೆಯ ಮುಖ್ಯಸ್ಥರು. (೩) ರಾಷ್ಟ್ರ- ಅಂದರೆ ಜನತೆಯ ಪ್ರತಿನಿಧಿಗಳು ಹೀಗೆ ಇರುತ್ತಿದ್ದರು. ಪ್ರಾಚೀನ ಕಾಲದಲ್ಲಿ ೧೮ ಜನ ಮಂತ್ರಿಗಳಿಗೆ ತೀರ್ಥರೆಂದು ಹೆಸರಿತ್ತು. ರಾಮಾಯಣ, ಅರ್ಥಶಾಸ್ತ್ರ ಮತ್ತು ಮಹಾಭಾರತದಲ್ಲಿ ಅವರ ಉಲ್ಲೇಖವಿದೆ. ನ್ಯಾಯಖಾತೆಯ ಮೇಲಿನ ಮತ್ತು ಕಾರ್ಯಕಾರೀ ಖಾತೆಯ ಮೇಲಿನ ಮುಖ್ಯ ಅಧಿಕಾರಿಗಳಿಗೆ ರಾಮಾಯಣದಲ್ಲಿ (೨.೧೦೦-೩೬) ತೀರ್ಥರೆಂಬ ಹೆಸರು ಕೊಡಲ್ಪಟ್ಟಿದೆ. ರಾಮಾಯಣ ಕಾಲಕ್ಕೆ ೧೮ ಜನ ತೀರ್ಥರಿದ್ದರು. ಕೌಟಿಲ್ಯನು ಈ ತೀರ್ಥರಿಗೆ ಮಹಾಮಾತ್ಯರೆಂದು ಹೆಸರು ಕೊಟ್ಟಿರುವನು. ನೀತಿವಾಕ್ಯಾಮೃತದ ೨ನೆಯ ಅಧ್ಯಾಯದಲ್ಲಿ ಸೋಮದೇವಸೂರಿಯು 'ತೀರ್ಥ' ಶಬ್ದದ ವ್ಯಾಖ್ಯೆಯನ್ನು ಹೀಗೆ ಕೊಟ್ಟಿರುವನು:- **ಧರ್ಮಸಮವಾಯಿನಃ ಕಾರ್ಯಸಮವಾಯಿನಶ್ಚ ಪುರುಷಾಃ ತೀರ್ಥಮ್.** ಅರ್ಥಶಾಸ್ತ್ರದಲ್ಲಿ (ಪು. ೧. ಅ. ೧೨-೮; ಪು. ೫. ಅ. ೨. ೭೧) ತೀರ್ಥರುಗಳ

ಪಟ್ಟಿಯು ಹೀಗೆ ಇದೆ. (೧) ಮಂತ್ರಿ (೨) ಪುರೋಹಿತ (೩) ಸೇನಾಪತಿ (೪) ಯುವರಾಜ (೫) ದೌವಾರಿಕ (೬) ಅಂತರ್ವಂಶಿಕ (೭) ಪ್ರಶಾಸ್ತಾ (೮) ಸಮಾಹರ್ತಾ (೯) ಸನ್ನಿಧಾತಾ (೧೦) ಪ್ರದೇಷ್ಟಾ (೧೧) ನಾಯಕ (೧೨) ಪೌರವ- ವ್ಯವಹಾರಿಕ (೧೩) ಕಾರ್ಮಾಂತಿಕ (೧೪) ಮಂತ್ರಿ ಪರಿಷದಧ್ಯಕ್ಷ (೧೫) ದಂಡಪಾಲ (೧೬) ದುರ್ಗಪಾಲ (೧೭) ಅಂತಪಾಲ ಅಥವಾ ರಾಷ್ಟ್ರಾಂತಪಾಲ (೧೮) ಆಟವಿಕ.

ಪ್ರದೇಷ್ಟಾ ಅಂದರೆ ಫೌಜದಾರೀ ಖಾತೆಯ ಮುಖ್ಯ ಮ್ಯಾಜಿಸ್ಟ್ರೇಟನು. ಆದರೆ ಡಾಕ್ಟರ ಥಾಮಸ್ ಇವರ ಅಭಿಪ್ರಾಯದಂತೆ ಪ್ರದೇಷ್ಟನೆಂದರೆ ಸುದ್ದಿಖಾತೆಯ ಮುಖ್ಯಸ್ಥನು.

ಈ ೧೮ ಖಾತೆಗಳಲ್ಲಿ ಸರಕಾರದ ಬಹುಶಃ ಯಾವತ್ತು ಅಂಗಗಳು ಸಮಾವೇಶವಾಗುತ್ತವೆ. ಅರ್ಥಾತ್ ಇವರ ಕೈಕೆಳಗೆ ಅನೇಕ ಚಿಕ್ಕ ದೊಡ್ಡ ಅಧಿಕಾರಸ್ಥರಿದ್ದರು. ಅವರ ಸಹಾಯದಿಂದ ರಾಜ್ಯದ ಆಡಳಿತೆಯು ನಡೆಯುತ್ತಿತ್ತು.

**ಮಂತ್ರಿವರ್ಗದ ಕರ್ತವ್ಯಗಳು:-** ಶುಕ್ರನೀತಿಯಲ್ಲಿ ಮಂತ್ರಿವರ್ಗದ ಕರ್ತವ್ಯಗಳು ಒಂದು ಶ್ಲೋಕದಲ್ಲಿ ಸಂಗ್ರಹಿತವಾಗಿ ಕೊಡಲ್ಪಟ್ಟಿವೆ:-

**ರಾಜ್ಯಂ ಪ್ರಜಾಬಲಂ ಕೋಶಃ ಸುನೃಪತ್ವಂ ನ ವರ್ಧಿತಂ।**
**ಯನ್ಮಂತ್ರತೋಽರಿನಾಶಸ್ತೈರ್ಮಂತ್ರಿಭಿಃ ಕಿಂ ಪ್ರಯೋಜನಂ॥** ೨-೮೩

ಅಂದರೆ ಮಂತ್ರಿವರ್ಗದ ಸಲಹೆಯಿಂದ ರಾಜ್ಯ, ಪ್ರಜೆ, ಬಲ, ಕೋಶ ಮತ್ತು ಸುನೃಪತ್ವ ಇವುಗಳು ಉತ್ತರೋತ್ತರವಾಗಿ ವೃದ್ಧಿ ಹೊಂದದಿದ್ದರೆ ಮತ್ತು ಅರಿನಾಶವಾಗದಿದ್ದರೆ ಅಂಥ ಮಂತ್ರಿಗಳಿಂದೇನು ಪ್ರಯೋಜನವೆಂದು ಈ ಶ್ಲೋಕದ ಸಾರಾಂಶವು. ಸುನೃಪತ್ವವೆಂದರೆ ಮಂತ್ರಿವರ್ಗದಿಂದ ಉತ್ತಮವಾಗಿ ನಿಯಂತ್ರಿತವಾದ ಅಥವಾ ಶೋಧನವಾದ ನೃಪತ್ವ. ಈ ತತ್ವವನ್ನು ಶುಕ್ರಾಚಾರ್ಯರು ಕೆಳಗಿನ ಶ್ಲೋಕದಲ್ಲಿ ವಿಶದಪಡಿಸಿರುವರು. K-1269

**ರೋಧನಂ ನ ಭವೇತ್ತಸ್ಮಾದ್ರಾಜ್ಞಸ್ತೇಸ್ಯುಃ ಸುಮಂತ್ರಿಣಃ ।**
**ನ ಬಿಭೇತಿ ನೃಪ ಏಭ್ಯಸ್ತೈಃ ಸ್ಯಾತ್ಕಿಂರಾಜ್ಯವರ್ಧನಂ ॥**

ಅಂದರೆ, ಯಾವ ಅರಸನು ಮಂತ್ರಿಗಳಿಗೆ ಅಂಜಿ ನಡೆಯುವದಿಲ್ಲವೋ ಅಂಥವನಿಂದ ರಾಜ್ಯವೃದ್ಧಿಯಾಗಲಾರದು, ಎಂದು ಇದರ ಭಾವಾರ್ಥ. ಸಾರಾಂಶ, ಸುನೃಪತ್ವವೆಂದರೆ ನಿಯಂತ್ರಿತವಾದ ನೃಪಸತ್ತೆಯು. ಮಂತ್ರಿಗಳು ರಾಜನ ಮತ್ತು ರಾಷ್ಟ್ರದ ಜವಾಬದಾರ ಸೇವಕರೆಂಬ ತತ್ವವನ್ನೂ ಶುಕ್ರಾಚಾರ್ಯರು ಒಂದು ಶ್ಲೋಕದಲ್ಲಿ ಹೇಳಿರುವರೆಂದು ಪ್ರೊ. ಜಯಸ್ವಾಲ ಇವರು ಹೇಳುತ್ತಾರೆ. ಆದರೆ ಆದರ ಅರ್ಥವು ಸ್ಪಷ್ಟವಾಗಿ ಹಾಗೆ ಆಗುವಂತೆ ತೋರುವುದಿಲ್ಲ.

**ಪುರೋಧಾಃ ಪ್ರಥಮಂ ಶ್ರೇಷ್ಠಃ ಸರ್ವೇಭ್ಯೋ ರಾಜರಾಷ್ಟ್ರಭೃತ್ ।**
**ತದನು ಸ್ಯಾತ್ಪ್ರತಿನಿಧಿಃ ಪ್ರಧಾನಸ್ತದನಂತರವ್॥**

ಇದರ ಅರ್ಥವೇನಂದರೆ– ಎಲ್ಲಕ್ಕೂ ಶ್ರೇಷ್ಠನೆಂದರೆ ಮೊದಲನೆಯ ವರ್ಗದ ಮತ್ತು ರಾಜನನ್ನೂ ರಾಷ್ಟ್ರವನ್ನೂ ಪಾಲನಮಾಡುವ ಪುರೋಹಿತನು. ಅವನ ನಂತರ ಪ್ರತಿನಿಧಿ, ಪ್ರಧಾನ ಮುಂತಾದ ರಾಜನಿಗೂ ರಾಷ್ಟ್ರಕ್ಕೂ ಜವಾಬದಾರರಾಗಿರುವವರು ಬರುತ್ತಾರೆ. ಇದರಿಂದ ರಾಜನು ಮಂತ್ರಿಮಂಡಳದ ಉಪದೇಶದಂತೆ ರಾಜ್ಯಕಾರಭಾರವನ್ನು ನಡಿಸಬೇಕೆಂಬುದು ಸ್ಪಷ್ಟವಾಗುತ್ತದೆ. (ನೀತಿವಾಕ್ಯಾಮೃತ ೧೦). ಮಹಾಭಾರತದಲ್ಲಿಯೂ ಕೂಡ ಇದೇ ಪ್ರಕಾರದ ಮಹತ್ವದ ರಾಜಕೀಯ ತತ್ವವು ಪ್ರತಿಪಾದಿಸಲ್ಪಟ್ಟಿರುತ್ತದೆ.

**ಪರತಂತ್ರಃ ಸದಾ ರಾಜಾ ।**
**ಸಂಧಿವಿಗ್ರಹಯೋಗೇ ಚ ಕುತೋ ರಾಜ್ಞಃ ಸ್ವತಂತ್ರತಾ ।**
**ಮನ್ಯೆ ಚಾಮಾತ್ಯ ಸಹಿತೇ ಕುತಸ್ತಸ್ಯ ಸ್ವತಂತ್ರತಾ ॥**

ಶಾಂತಿಪರ್ವ ಅ. ೩೨೫ ಶ್ಲೋ. ೧೩೯-೧೪೦

**ಮಂತ್ರಿವರ್ಗದ ಕಾರ್ಯಪದ್ಧತಿ:–** ಮಂತ್ರಿ ಪರಿಷತ್ತಿನಲ್ಲಿ ವಿಶೇಷ ಕಾರ್ಯಗಳು ಮಾತ್ರ ಚರ್ಚಿಸಲ್ಪಡುತ್ತಿದ್ದವು. ಸಾಮಾನ್ಯ

ಕೆಲಸವೆಲ್ಲವೂ ಮಂತ್ರಿಗಳಿಂದಲೇ ಸಾಗಿಸಲ್ಪಡುತ್ತಿತ್ತು. ಲೇಖೀ ಪತ್ರಗಳಿಂದಲೇ ಕೆಲಸ ನಡೆಸಬೇಕಾಗುತ್ತಿತ್ತಲ್ಲದೆ ಬರೀ ಬಾಯಿ ಯಿಂದ ನಡಿಯುತ್ತಿದ್ದಿಲ್ಲ. ಮಂತ್ರಿ, ಪ್ರಾಡ್–ವಿವಾಕ್, ಪಂಡಿತಾ ಮಾತ್ಯ, ದೂತ ಇವರಿಂದ 'ಇದು ನಮಗೆ ವಿರುದ್ಧವಿಲ್ಲ' ವೆಂಬದಾಗಿ ಯಾವುದೊಂದು ಮಾತು ಸಮ್ಮತಿಸಲ್ಪಡದೆ ಯಾವ ಕೆಲಸವೂ ನಡೆ ಯುತ್ತಿದ್ದಿಲ್ಲ. ಅಲ್ಲಿಂದ ಅದು ಅಮಾತ್ಯ, ಸುಮಂತ್ರ, ಆ ಬಳಿಕ ಪ್ರತಿನಿಧಿ, ಯುವರಾಜ ಮತ್ತು ಪುರೋಹಿತ ಇವರ ಕಡೆಗೆ ಹೋಗು ತ್ತಿತ್ತು. ಪ್ರತಿಯೊಬ್ಬ ಮಂತ್ರಿಯು ಅದರ ಕೆಳಗೆ ತಮ್ಮ ಮುದ್ರೆ ಯನ್ನೊತ್ತುತ್ತಿದ್ದನು. ಅನಂತರ ಅವರೆಲ್ಲರೂ ಸಭೆಯಲ್ಲಿ ಕೂಡಿ ಪುನಃ ಎಲ್ಲರೂ ತಮ್ಮ ಸಹಿಗಳನ್ನು ಮಾಡಿ ಆ ಸಭೆಯ ಮುದ್ರೆ ಯನ್ನು ಒತ್ತುತ್ತಿದ್ದರು. ಅಲ್ಲಿಂದ ಅದು ಅರಸನ ಕಡೆಗೆ ಕಳುಹಿಸ ಲ್ಪಡುತ್ತಿತ್ತು. ಆತನು ಅದರ ಕೆಳಗೆ 'ನೋಡಲ್ಪಟ್ಟಿತು' ಎಂಬುದಾಗಿ ಮಾತ್ರ ಬರೆಯುತ್ತಿದ್ದನು. ಏಕೆಂದರೆ ಅದರ ವಿಷಯವಾಗಿ ಟೀಕೆ ಮಾಡುವುದಕ್ಕೆ ಆತನಿಗೆ ಅಧಿಕಾರವಿದ್ದಿಲ್ಲ. ಅರಸನು ಅದನ್ನು ಟೀಕಿ ಸುವುದಕ್ಕೆ ಅಕ್ಷಮನೆಂದೇ ಆಗಿನ ರಾಜಕೀಯ ತತ್ವವು. ಮುಂಚೆ ಒಮ್ಮೆ ಅರಸನ ಕಡೆಗೆ ಅದು ಕಳಿಸಲ್ಪಡುತ್ತಿತ್ತು. ಆದರೆ ಆಗ, ಮಿಕ್ಕವ ರಂತೆಯೇ ಆತನ ಅಭಿಪ್ರಾಯವನ್ನೂ ತಿಳಿದುಕೊಳ್ಳುವ ಉದ್ದೇಶ ದಿಂದ ಮಾತ್ರ. ಆಗ ಆತನು ಆ ಸಂಬಂಧವಾಗಿ ವಿಚಾರಮಾಡಿ ತನ್ನ ಸಲಹೆಯನ್ನು ಕೊಡಬಹುದು. ಮುಂದೆ ಮಂತ್ರಿಪರಿಷತ್ತಿನಲ್ಲಿ ಅದರ ಚರ್ಚೆಯಾಗಿ ನಿರ್ಣಯವಾದ ಬಳಿಕ ಮಾತ್ರ ಆತನಿಗೆ ಆ ಸಂಬಂ ಧವಾಗಿ ಟೀಕಿಸಲಿಕ್ಕೆ ಅಧಿಕಾರವಿದ್ದಿಲ್ಲ. ಆ ಬಳಿಕ ಅಂಥ ಲೇಖ್ಯವು ಕಾಯದೆಯ ಪ್ರಕಾರ ಸರಕಾರ **(ಅರಸ)** ವಾಗುತ್ತದೆ, ಅಂದರೆ ಅದು ಆ ವ್ಯಕ್ತಿಯ ಲೇಖ್ಯವಲ್ಲ, ಸರಕಾರದ ಲೇಖ್ಯ. ಲೇಖ್ಯವಿಲ್ಲದ ಯಾವ ಆಜ್ಞೆಯನ್ನೂ ಅವರು ಪ್ರತಿಪಾಲಿಸತಕ್ಕದ್ದಲ್ಲ. ಹೀಗೆ ಲೇಖ್ಯವನ್ನು ಕೊಡದೆ ಬಾಯಿಯಿಂದ ಅರಸನೇ ಆಗಲಿ, ಮಿಕ್ಕ ಅಧಿಕಾರಿಯೇ ಆಗಲಿ ಕೊಟ್ಟ ಯಾವ ಹುಕುಮೂ ಮಾನ್ಯವಲ್ಲ. ಹಾಗೆ ಹುಕುಂ ಕೊಡುವವರು ಚೋರರೆಂದು ತಿಳುವಳಿಕೆ. ಸಾರಾಂಶ, ಶುಕ್ರನೀತಿಯ ಪ್ರಕಾರ ಅರಸನ

ಕೈಯಲ್ಲಿ ಏನೂ ಅಧಿಕಾರವಿದ್ದಿಲ್ಲ. ಎಲ್ಲ ಅಧಿಕಾರವೂ ಮಂತ್ರಿಪರಿಷತ್ತಿನ ಕೈಯಲ್ಲಿತ್ತು. ಈ ವಿಷಯವಾಗಿ ಮೆಗ್ಯಾಸ್ಥಿನೀಸನ ಅಭಿಪ್ರಾಯವೂ ಹೀಗೆಯೇ ಇದೆ. ಮಂತ್ರಿಪರಿಷತ್ತಿನ ಮತ್ತು ಮಂಡಳದ ಕೈಯಲ್ಲಿಯೇ ಯಾವತ್ತೂ ಅಧಿಕಾರವಿರುತ್ತಿತ್ತೆಂದೂ ಮಂತ್ರಿಪರಿಷತ್ತಿನ ವಿಷಯವಾಗಿ ಜನರಲ್ಲಿ ಬಹಳ ಪೂಜ್ಯಬುದ್ಧಿಯಿತ್ತೆಂದೂ, ಅದು ಪ್ರಾಂತಿಕ ಗವ್ಹರ್ನರರೇ ಮುಂತಾದ ಅಧಿಕಾರಿಗಳನ್ನು ನೇಮಿಸುವುದು, ಸೇನಾಪತಿಗಳನ್ನು ನೇಮಿಸುವುದು, ಇವೇ ಮುಂತಾದ ಯಾವತ್ತು ಕಾರ್ಯಗಳನ್ನು ಮಾಡುತ್ತಿತ್ತೆಂದೂ ಅವನು ಬರೆದಿಟ್ಟಿರುವನು.

ಮಹಾಭಾರತದಲ್ಲಿ ಉಲ್ಲೇಖಿಸಲ್ಪಟ್ಟ ಭಾರದ್ವಾಜನೆಂಬ ರಾಜನೀತಿವಿಶಾರದನು ಮೇಲ್ಕಾಣಿಸಿದ್ದನ್ನೇ ಸಮರ್ಥಿಸುತ್ತಾನೆ.

ಅಶೋಕನೇನೋ ಮೇಲಿನ ವ್ಯವಸ್ಥೆಯಲ್ಲಿ ಬಹಳ ಬದಲಾವಣೆಗಳನ್ನು ಮಾಡಿದನು. ಆತನು ಅನಿಯಂತ್ರಿತನಾದ ಅರಸನಾಗಿದ್ದನು. ಆದರೆ ಆತನು ಬಹಳ ದಯಾಳುವಾಗಿದ್ದನು. ಮಂತ್ರಿಮಂಡಳವನ್ನು ಅತನು ಕಿತ್ತೊಗೆಯಲಿಲ್ಲ, ಅಥವಾ ಜನರಿಗೆ ಅಹಿತವಾಗುವ ಕಟ್ಟಳೆಗಳನ್ನು ಎಂದೂ ಮಾಡಲಿಲ್ಲ. ಇರಲಿ.

ಪ್ರತಿಯೊಬ್ಬ ಮಂತ್ರಿಯ ಕೈಕೆಳಗೆ ಇಬ್ಬರು ಉಪಮಂತ್ರಿಗಳಿರುತ್ತಿದ್ದರು. ಈ ಮೂವರಲ್ಲಿ ಹಿರಿಯವನಿಗೆ ಮಹಾಮಾತ್ಯನೆಂದೂ ಕಿರಿಯವನಿಗೆ ಕುಮಾರಾಮಾತ್ಯನೆಂದೂ ಗುಪ್ತರ ಕಾಲದಲ್ಲಿ ಬಿರುದು. ಮಂತ್ರಿಗಳು ಒಂದು ಜುಗದಾನ (Port-folio) ದಿಂದ ಮತ್ತೊಂದು ಜುಗದಾನಕ್ಕೆ ವರ್ಗ ಮಾಡಲ್ಪಡುತ್ತಿದ್ದರು. ३, ೫, ೭ ಅಥವಾ ೧೦ ವರ್ಷಕ್ಕೊಮ್ಮೆ ಹೀಗೆ ವರ್ಗಾವರ್ಗಿಗಳಾಗುತ್ತಿದ್ದವು. ಈ ವರ್ಗಾವರ್ಗಿಗೆ ಅನುಸಂಧಾನವೆಂದು ಹೆಸರು.

**ಮಂತ್ರಿ ಪರಿಷತ್ತಿನಲ್ಲಿ ಜಾತ್ಯನ್ವಯ** ಪ್ರತಿನಿಧಿತ್ವ:- ನಾಲ್ಕೂ ವರ್ಣಗಳ ಪ್ರತಿನಿಧಿಗಳು ಇದರಲ್ಲಿ ಇರುತ್ತಿದ್ದರು. ಮಹಾಭಾರತದಲ್ಲಿ ३೭ ಸದಸ್ಯರದೊಂದು ಪಟ್ಟಿಯು ಕೊಡಲಟ್ಟಿದೆ. ಅದು ಹೀಗೆ

ಇದೆ. ಬ್ರಾಹ್ಮಣರು ೪, ಕ್ಷತ್ರಿಯರು ೮, ವೈಶ್ಯರು ೨೧, ಶೂದ್ರರು ೩, ಸೂತ ೧. ಅಂತು ೩೭. ಪ್ರಜೆಗಳಲ್ಲಿ ವೈಶ್ಯ ವರ್ಗದ ಜನರೇ ಬಹಳ. ಆದ ಕಾರಣ ಅವರ ಪ್ರತಿನಿಧಿಗಳ ಸಂಖ್ಯೆಯೂ ಹೆಚ್ಚು.

**ಮಂತ್ರಿಗಳಾಗಲಿಕ್ಕೆ ಅರ್ಹರು ಯಾರು?-** ಅರಸುಮನೆತನದಲ್ಲಿ ಯುವರಾಜನು. ಮಿಕ್ಕ ೧೭ ಜನರಲ್ಲಿ ಯಾರು ಯಾರು ಇರುತ್ತಿದ್ದರೆಂಬ ಬಗ್ಗೆ ಕೌಟಿಲ್ಯನು ಭಿನ್ನ ಭಿನ್ನ ಜನರ ಅಭಿಪ್ರಾಯಗಳನ್ನು ಕೊಟ್ಟಿರುವನು. (೧) ಭಾರದ್ವಾಜ (ದ್ರೋಣಾಚಾರ್ಯ) (೨) ವಿಶಾಲಾಕ್ಷ (೩) ಪರಾಶರ (೪) ಪಿಶುನ (ನಾರದ) (೫) ಕೌಣಪದಂತ (ಭೀಷ್ಮ) (೬) ವಾತವ್ಯಾಧಿ (ಉದ್ಧವ) (೭) ಬಾಹುದಂತಿಪುರ (ಇಂದ್ರ). ಇದರಿಂದ ಆಗಿನ ಕಾಲದಲ್ಲಿ ರಾಜನೀತಿಯು ಒಂದು ಶಾಸ್ತ್ರದಂತೆ ಅಭ್ಯಾಸ ಮಾಡಲ್ಪಡುತ್ತಿತ್ತೆಂಬುದು ಸ್ಪಷ್ಟವಾಗುತ್ತದೆ. ಅಲ್ಲದೆ ಬೇರೆ ಬೇರೆ ರಾಜನೀತಿಕಾರರ ಅಭಿಪ್ರಾಯಗಳು ಬೇರೆ ಬೇರೆಯಾಗಿದ್ದವೆಂಬುದೂ ಗೊತ್ತಾಗುತ್ತದೆ. ಅಮಾತ್ಯನಲ್ಲಿ ಸಾಧಾರಣತಃ ೨೫ ಗುಣಗಳಿರತಕ್ಕದ್ದು. (೧) ಆತನು ಜಾನಪದನಿರಬೇಕು. ಅಂದರೆ ಅದೇ ರಾಜ್ಯದ ನಿವಾಸಿಯಾಗಿರಬೇಕಲ್ಲದೆ, ಪರದೇಶದವನಾಗಿರಕೂಡದು. (೨) ಅಭಿಜಾತ ಅಂದರೆ ಒಳ್ಳೇ ಕುಲದವನಾಗಿರಬೇಕು. (೩) ಸ್ವವಗ್ರಹ ಅಂದರೆ ಕೈಕೆಳಗಿನವರಿಂದ ಕೆಲಸ ತೆಗೆದುಕೊಳ್ಳಲಿಕ್ಕೆ ಸಮರ್ಥನಾಗಿರಬೇಕು. (೪) ಕೃತಶಿಲ್ಪ ಅಂದರೆ ಕಲಾನಿಪುಣನಾಗಿರಬೇಕು. (೫) ಚಕ್ಷುಷ್ಮಾನ್ ಅಂದರೆ ದೂರದೃಷ್ಟಿಯುಳ್ಳವನಾಗಿರಬೇಕು. (೬) ಪ್ರಾಜ್ಞ (೭) ಧಾರಯಿಷ್ಣು (೮) ದಕ್ಷ (೯) ವಾಗ್ಮಿ (೧೦) ಪ್ರಗಲ್ಭ (೧೧) ಪ್ರತಿಪತ್ತಿಮಾನ್-ಎಲ್ಲರ ಲಕ್ಷ್ಯವನ್ನಾಕರ್ಷಿಸುವವ (೧೨) ಉತ್ಸಾಹ-ಪ್ರಭಾವಯುಕ್ತ (೧೩) ಕ್ಲೇಶಸಹ (೧೪) ಶುಚಿ (೧೫) ಮೈತ್ರ (೧೬) ದೃಢಭಕ್ತಿ (೧೭) ಶೀಲ-ಬಲ-ಆರೋಗ್ಯ-ಸತ್ವಸಂಯುಕ್ತ (೧೮) ಸ್ತಂಭಚಾಪಲ್ಯವರ್ಜಿತ (೧೯) ಸಂಪ್ರಿಯ (೨೦) ವೈರಿಗಳನ್ನು ನಾಶ ಮಾಡುವವ ವೈರಾಣಾಂ ಅಕರ್ತಾ.

ಇವೆಲ್ಲ ಗುಣಗಳುಳ್ಳವನು ಮೊದಲನೆಯ ನಂಬರಿನವನು. ಇವುಗಳಲ್ಲಿ ೩/೪ ಗುಣಗಳುಳ್ಳವನು ಎರಡನೆಯ ನಂಬರಿನವನು. ೧/೨ ಗುಣಗಳುಳ್ಳವನು ಮೂರನೆಯ ನಂಬರಿನವನು.

ಅರಸನು ಅಮಾತ್ಯರನ್ನಾರಿಸುವಾಗ ಪುರೋಹಿತ ಮತ್ತು ಮುಖ್ಯ ಮಂತ್ರಿಯ ಸಲಹೆಯನ್ನು ತೆಗೆದುಕೊಳ್ಳಬೇಕು. ಆ ಬಳಿಕ ಅರ್ಥಶಾಸ್ತ್ರದಲ್ಲಿ ಪ್ರಾಮಾಣಿಕತನವನ್ನು ಪರೀಕ್ಷಿಸುವುದಕ್ಕೋಸ್ಕರ ಹೇಳಿದ ನಾಲ್ಕು ಉಪಧಾ ಅಂದರೆ ಒರೆಗಲ್ಲುಗಳನ್ನು ಹಚ್ಚಿ ಆತನನ್ನು ಪರೀಕ್ಷಿಸಬೇಕು. ಈ ಒರೆಗಲ್ಲುಗಳು ಆತನನ್ನು ಗುಪ್ತವಾಗಿ ಪರೀಕ್ಷಿಸುವ ಉಪಾಯಗಳು. ಅವು ಯಾವುವೆಂದರೆ [೧] ಧರ್ಮೋಪಧಾ ಅಂದರೆ ಆತನ ನೀತಿ ನಡಾವಳಿಗಳು ಚಲೋ ಅವೆಯೋ ಇಲ್ಲವೋ ಎಂಬುದು [೨] ಅರ್ಥೋಪಧಾ ಅಂದರೆ ಆತನು ಧನದ ಮೋಹಕ್ಕೆ ಒಳಗಾಗದವನಿರುವನೋ ಇಲ್ಲವೋ ಎಂಬುದು (೩) ಕಾಮೋಪಧಾ ಅಂದರೆ ಕಾಮಕ್ಕೆ ಒಳಗಾಗದವನಿರುವನೋ ಇಲ್ಲವೋ ಎಂಬುದು (೪) ಭಯೋಪಧಾ ಅಂದರೆ ಭಯದಿಂದ ಆತನ ಮನಸ್ಸು ವಿಹ್ವಲವಾಗುತ್ತದೆಯೋ ಹೇಗೆ ಎಂಬುದು. ಧರ್ಮೋಪಧೆಯ ಪರೀಕ್ಷೆಯಲ್ಲಿ ಪಾಸಾದವನನ್ನು ಧರ್ಮಸ್ಥೀಯ ಮತ್ತು ಕಂಟಕಶೋಧನ ಖಾತೆ (Law & order) ಖಾತೆಗಳಿಗೂ, ಅರ್ಥೋಪಧೆಯಲ್ಲಿ ಪಾಸಾದವನನ್ನು ಮುಲಕಿ ಖಾತೆಗೂ, ಸಮಾಹರ್ತಾ ಸನ್ನಿಧಾತಾ ಮುಂತಾದ ಕೆಲಸಗಳಿಗೂ, ಕಾಮೋಪಧೆಯಲ್ಲಿ ಪಾಸಾದವನಿಗೆ ಅಂತಃಪುರದ ಕೆಲಸಗಳಲ್ಲಿ, ಭಯೋಪಧೆಯಲ್ಲಿ ಪಾಸಾದವನಿಗೆ ಸ್ವಂತ ಅರಸನ ಕೆಳಗಿನ ಅಧಿಕಾರಸ್ಥಳಗಳಿಗೆ ನೇಮಿಸುತ್ತಿದ್ದರು.

**ಅಮಾತ್ಯರ ಅಧಿಕಾರಗಳು:–** (೧) ಮಂತ್ರ–ರಾಜಕೀಯ ಧೋರಣದ ಚರ್ಚೆ (೨) ಆ ಧೋರಣವನ್ನು ಜ್ಯಾರಿಯಲ್ಲಿ ತರುವುದು. (೩) ಆಯಾ ಖಾತೆಗಳ ಯಾವತ್ತು ಕೆಲಸ (೪) ಆದಾಯ ವ್ಯಯದ ಕೆಲಸ (೫) ಸೈನ್ಯ ಮತ್ತು ಅದರ ಮುಖಂಡತ್ವ (೬) ಶತ್ರುಗಳ ಮತ್ತು ಕಾಡು ಜನರ ಹಾವಳಿಯನ್ನು ತಡೆಯುವುದು (೭)

ಸರಕಾರದ ಆಡಳಿತವನ್ನು ಚೆನ್ನಾಗಿ ಸಾಗಿಸುವುದು (೮) ರಾಷ್ಟ್ರವು ಅವನತಿಯನ್ನು ಹೊಂದದಂತೆ ಎಚ್ಚರಿರುವುದು (೯) ರಾಜಪುತ್ರರ ಸಂರಕ್ಷಣೆ ಮತ್ತು ಅವರನ್ನು ಅಧಿಕಾರಸ್ಥಳಗಳಿಗೆ ನೇಮಿಸುವುದು.

---

## ೧೧ನೆಯ ಪ್ರಕರಣ

## ಶಾಸನ ಪ್ರಬಂಧ



ದೇಶದ ಒಳ ಆಡಳಿತದ ಬಗ್ಗೆ ಜಾನಪದದಲ್ಲಿ ಅಂದರೆ ದೇಶದಲ್ಲಿ ಕೆಳಗೆ ಕಾಣಿಸಿದಂತೆ ವಿಭಾಗಗಳು ಮಾಡಲ್ಪಟ್ಟಿದ್ದವು.

(೧) ರಾಜಧಾನಿ
(೨) ಗ್ರಾಮ
(೩) ಸಂಗ್ರಹಣ=೧೦ ಗ್ರಾಮಗಳ ಗುಂಪು
(೪) ಖಾರ್ವಟಿಕ=೨೦ ಸಂಗ್ರಹಣಗಳ ಗುಂಪು=೨೦೦ ಗ್ರಾಮಗಳು
(೫) ದ್ರೋಣಮುಖ=೨ ಖಾರ್ವಟಿಕಗಳು=೪೦೦ ಗ್ರಾಮಗಳು
(೬) ಸ್ಥಾನೀಯ=೨ ದ್ರೋಣ ಮುಖಗಳು=೮೦೦ ಗ್ರಾಮಗಳು
(೭) ಜಾನಪದ=೪ ಸ್ಥಾನೀಯಗಳು

ದೇಶವು ಬಹಳ ದೊಡ್ಡದಿದ್ದರೆ ಅದರಲ್ಲಿ ಅನೇಕ ಜಾನಪದಗಳಿರುತ್ತಿದ್ದವು. ಇಂಥ ದೊಡ್ಡ ದೇಶಗಳಿಗೆ ಮಹಾಜಾನಪದಗಳೆಂದು ಹೆಸರು. ಇಲ್ಲಿ ಕೊಟ್ಟಿರುವ ನಕಾಶೆಯಿಂದ ಕ್ರಿ. ಪೂ. ೬೦೦ ರಲ್ಲಿ ಹಿಂದುಸ್ಥಾನ ದೇಶದಲ್ಲಿ ೧೬ ಮಹಾಜಾನಪದಗಳಿದ್ದವೆಂಬುದು ಗೊತ್ತಾಗುವುದು. ಇವುಗಳಲ್ಲಿ ಕೆಲವು ರಾಜಾಧೀನ ರಾಜ್ಯಗಳಿದ್ದವು, ಕೆಲವು ಅಲ್ಪಜನಸತ್ತಾಕ ರಾಜ್ಯಗಳಿದ್ದವು, ಮತ್ತು ಮಿಕ್ಕವೆಲ್ಲವೂ ಗಣ ಅಥವಾ ಸಂಘರಾಜ್ಯ (Republics) ಗಳಿದ್ದವು. ಇವುಗಳಲ್ಲಿ ಮಹತ್ವವಾದವುಗಳು ಪಂಜಾಬ, ಸಂಯುಕ್ತಪ್ರಾಂತ ಮತ್ತು ಹಿಂದುಸ್ಥಾನದ ಪೂರ್ವಪ್ರದೇಶಗಳಲ್ಲಿದ್ದವು. ಈ ರಾಜ್ಯಗಳ ಅರಸರಿಗೆ ಮಂತ್ರಿ

ಮಂಡಳ ಮತ್ತು ಮಂತ್ರಿಪರಿಷತ್ತಿನ ಸಲಹೆಯಿಲ್ಲದೆ ಆಡಳಿತವನ್ನು ನಡಿಸುವ ಅಧಿಕಾರವಿದ್ದಿಲ್ಲ. ಅಮಾತ್ಯ ಅಥವಾ ಮಂತ್ರಿಗಳೇ ಮುಖ್ಯ ರಾಜಸಾಧನಗಳು. ಆತ್ಮಾ ಅಥವಾ ಪುರುಷನಿಗೆ ಹೇಗೆ ೮ ಪ್ರಕೃತಿ ಗಳೋ ಹಾಗೆ ರಾಜನಿಗೆ ಈ ಅಷ್ಟವಿಧ ಪ್ರಕೃತಿಗಳು. ಅವರು ಯಾರೆಂದರೆ (೧) ಮುಖ್ಯ ಸಚಿವ (೨) ಸೇನಾಪತಿ (೩) ಪುರೋಹಿತ (೪) ದೂತ (೫) ದುರ್ಗಾಧ್ಯಕ್ಷ (೬) ಪ್ರಾಡ್ ವಿವಾಕ್ (೭) ಪ್ರತಿನಿಧಿ (೮) ಯುವ ರಾಜ. ಕೆಲಕೆಲವು ಕಾಲದಲ್ಲಿ ಈ ಅಷ್ಟವಿಧ ಪ್ರಕೃತಿಗಳು ಭಿನ್ನಭಿನ್ನ ವಾಗಿದ್ದವು. ಹಿಂದೆ ಒಮ್ಮೆ ಆ ಹೆಸರುಗಳನ್ನು ಕೊಟ್ಟಿಯೇ ಇರುವೆವು. ಆದರೆ, ಹೀಗೆ ಹೆಸರುಗಳು ಭಿನ್ನ ಭಿನ್ನ ಕಾಲಕ್ಕೆ ಬದಲಾಗುತ್ತಿದ್ದರೂ ಅಷ್ಟವಿಧ ಪ್ರಕೃತಿಗಳ ಮೂಲಕಲ್ಪನೆಯು ಯಾವಾಗಲೂ ಒಂದೇ. ಇರಲಿ. ಅರಸನು ಯಾವಾಗಲೂ ಕ್ಷತ್ರಿಯ ಕುಲದವನು. ಪಟ್ಟವು ವಂಶಪರಂಪರಾಗತವಾದಾಗ ಬಹುಶಃ ಆತನ ಹಿರಿಯ ಮಗನಿಗೆ ಅದು ಒಪ್ಪಿಸಲ್ಪಡುತ್ತಿತ್ತು. ಆ ಕಾಲದಲ್ಲಿ, ಅರಸನು ಸತ್ತ ಬಳಿಕ ಆತನ ರಾಣಿಗಾಗಲಿ ಆತನ ಹೆಣ್ಣು ಮಕ್ಕಳಿಗಾಗಲಿ ಪಟ್ಟವು ಹೋಗುತ್ತಿರಲಿಲ್ಲ. ಅರಸನು ಮಕ್ಕಳಿಲ್ಲದೆ ಸತ್ತರೆ, ಆತನ ರಾಣಿಯ ಕ್ಷೇತ್ರದಲ್ಲಿ ರಾಜಪುರೋಹಿತನು ಗರ್ಭವಿಡುವ ಪದ್ಧತಿಯು ಒಂದು ಕಾಲಕ್ಕೆ ರೂಢವಾಗಿತ್ತು. ಆದರೆ, ಅದು ಅತಿ ಪ್ರಾಚೀನ ಕಾಲದಲ್ಲಿ ಮಾತ್ರವೇ ಕೆಲಕಾಲ ಇತ್ತು.

ಅರಸನ ಪದವಿಯು ಶ್ರೇಷ್ಠ ಪದವಿಯಾಗಿತ್ತು. ಆದರೆ ಆತನ ಕರ್ತವ್ಯಗಳೂ ಅನೇಕವಾಗಿದ್ದುವು. ಅರ್ಥಾತ್, ರಾಜ್ಯವನ್ನು ಶತ್ರುಗಳಿಂದ ಸಂರಕ್ಷಿಸುವುದೂ ಆತನ ಕರ್ತವ್ಯವಾಗಿತ್ತು. ಆದರೆ, ಪುರೋಹಿತನಿಗೂ ರಾಜ್ಯದ ಸಂಬಂಧದಿಂದ ಕೆಲವು ಕರ್ತವ್ಯಗಳಿದ್ದವು. ಶ್ರೋತ್ರಿಯರ ಸಹಾಯದಿಂದ ಯಜ್ಞಯಾಗ, ಮಂತ್ರತಂತ್ರಗಳನ್ನು ಮಾಡುವುದು ಪುರೋಹಿತನ ಕರ್ತವ್ಯ. ಅವುಗಳನ್ನು ಮಾಡಿದರೆ, ಪಿಡುಗು 'ಬರಗಾಲ ಮುಂತಾದವುಗಳ ಪೀಡೆಯು ಪ್ರಜೆಗಳಿಗೆ ಉಂಟಾಗುವುದಿಲ್ಲವೆಂದು ತಿಳವಳಿಕೆಯಿತ್ತು. ಅರಸುತನದ ಕಾಲದಲ್ಲಿ, ಅರಸನ ಕಡೆಗೆ ಧಾರ್ಮಿಕ, ನ್ಯಾಯವಿಧಾಯಕ ಮತ್ತು ಸೈನ್ಯಕ್ಕೆ ಸಂಬಂ

ಧಿಸಿದ ಕೆಲಸಗಳಿರುತ್ತಿದ್ದವು. ಮುಂದೆ ಧಾರ್ಮಿಕ ಕೆಲಸಗಳು ಪುರೋಹಿತನ ಕಡೆಗೆ ಕೊಡಲ್ಪಟ್ಟವು. ನ್ಯಾಯವಿಧಾಯಕ ಕಾರ್ಯಗಳು ಮತ್ತು ಸೈನ್ಯವಿಷಯಕ ಕಾರ್ಯಗಳು ಮ್ಯಾಜಿಸ್ಟ್ರೇಟರ ಕಡೆಗೂ ಮಂತ್ರಿ ಪರಿಷತ್ತು ಮತ್ತು ಮಂತ್ರಿಮಂಡಳ ಕಡೆಗೂ ಹೋದವು. ಪುರೋಹಿತನ ಅಧಿಕಾರವು ಮುಂದೆ ಕಾಣಿಸಿದ ಖಾತೆಗಳಲ್ಲಿ ನಡೆಯುತ್ತಿತ್ತು. ಅವು ಯಾವುವೆಂದರೆ (೧) ಸಭಾ= ಧರ್ಮಶಾಲೆ, ದೇವಾಲಯ, ಪ್ರಾಗ್ವಂಶ ಅಥವಾ ಯಜ್ಞಶಾಲೆ, ಪ್ರಪಾ ಅಂದರೆ ಸಾರ್ವಜನಿಕ ಅರವಟ್ಟಿಗೆಗಳು, ಸತ್ರ, (ಅನ್ನಛತ್ರ) ದಾನ, ದೇವಪುಷ್ಟಿ, ಸಾರ್ವಜನಿಕ ಧಾರ್ಮಿಕ ಉತ್ಸವಗಳು ಮತ್ತು ಸಮಾರಂಭಗಳು ಇವುಗಳ ಮೇಲೆ ಪುರೋಹಿತನ ಅಧಿಕಾರವಿರುತ್ತಿತ್ತು. ಅರಸನು ಪುರೋಹಿತರ ಮನೆತನದೊಳಗಿಂದ ಯಾವನನ್ನಾದರೂ ತನ್ನ ಪೌರೋಹಿತ್ಯಕ್ಕೆ ನೇಮಿಸಿಕೊಳ್ಳುತ್ತಿದ್ದನು. ಸೇನಾಪತಿ, ಸಂಗ್ರಹೀತಾ, ಭಾಗದುಘ್, ದೂತ ಮತ್ತು ಅಕ್ಷವಾಪ ಈ ಏಳು ಜನ ರತ್ನಿಗಳನ್ನು ಆತನು ಆರಿಸಿಕೊಳ್ಳುತ್ತಿದ್ದನು. ಸಂಧಿವಿಗ್ರಹದ ಅಧಿಕಾರವು ಅರಸನ ಕೈಯಲ್ಲಿ ಇತ್ತು. ಆದರೆ ಮಂತ್ರಿಮಂಡಳ ಮತ್ತು ಜನತೆ ಇವರ ಇಚ್ಛೆಗನುಸಾರವಾಗಿ ಅತನು ನಡೆಯತಕ್ಕದ್ದೆಂದು ನಿರ್ಬಂಧವಿತ್ತು. ಬ್ರಾಹ್ಮಣವರ್ಗದ ಮೇಲೆ ಆತನಿಗೆ ಅರಸುತನದ ಹಕ್ಕು ಇರಲಿಲ್ಲ. ಪ್ರಾಚೀನ ಕಾಲದಲ್ಲಿ ಈ ಬ್ರಾಹ್ಮಣವರ್ಗವು ಅರಸನಿಗೆ ರಾಜ್ಯಕಾರಭಾರದಲ್ಲಿ ಬಹಳ ಉಪದ್ರವ ಕೊಡುತ್ತಿತ್ತು. ಮಹಾಭಾರತದ ಶಾಂತಿಪರ್ವದಲ್ಲಿ ರಾಜಸತ್ತೆಯನ್ನು ಉಪಭೋಗಿಸುವ ೩೬ ಸಾಧನಗಳು ಹೇಳಲ್ಪಟ್ಟಿವೆ. ಅವುಗಳನ್ನು ಅಮಲಿನಲ್ಲಿ ತಂದರೆ ಆತನ ರಾಜ್ಯಕ್ಕೆ ಚಿರಕಾಲ ಸುಖವಾಗುತ್ತಿತ್ತು.

ಯುವರಾಜನು ರಾಜಪುತ್ರರೊಳಗಿಂದ ಆರಿಸಲ್ಪಡುತ್ತಿದ್ದನು. ಬಹುಶಃ ಹಿರಿಯ ಮಗನೇ ಆರಿಸಲ್ಪಡುತ್ತಿದ್ದನು. ಆತನಿಗೂ ದೀಕ್ಷೆಯನ್ನು ತೆಗೆದುಕೊಳ್ಳಬೇಕಾಗುತ್ತಿತ್ತು. ರಾಜಪುತ್ರರ ಅಭ್ಯಾಸವು ಅನುಭವವುಳ್ಳ ಮಂತ್ರಿಗಳ ಮೇಲ್ವಿಚಾರಣೆಯಲ್ಲಿ ನಡೆಯುತ್ತಿತ್ತು. ಅವರು ಕಲಿಯತಕ್ಕ ಮುಖ್ಯ ವಿಷಯಗಳಾವುವೆಂದರೆ- (೧) ರಾಜ

ನೀತಿಶಾಸ್ತ್ರ (Politics) ಮತ್ತು ಧರ್ಮಶಾಸ್ತ್ರ. ಹೀಗೆ ವಿದ್ಯೆ ಕಲಿತ ಬಳಿಕ ಯುವರಾಜನು ಮಂತ್ರಿಮಂಡಳ ಮತ್ತು ಮಂತ್ರಿಪರಿಷತ್ತುಗಳ ಸಭೆಗಳಿಗೆ ಹೋಗಿ ಆಡಳಿತದ ವಿಷಯವನ್ನು ಕಲಿಯಬೇಕಾಗುತ್ತಿತ್ತು. ಆನ್ವೀಕ್ಷಿಕೀ (ತರ್ಕ, ನ್ಯಾಯ, ವೇದಾಂತ) (೨) ಮೂರು ವೇದಗಳು (೩) ವಾರ್ತಾ ಅಥವಾ ಅರ್ಥಶಾಸ್ತ್ರ (Economic) (೪) ದಂಡನೀತಿ (Politics) ಈ ನಾಲ್ಕು ವಿದ್ಯೆಗಳಲ್ಲಿ ಆತನು ಪ್ರವೀಣನಾಗತಕ್ಕದ್ದು. ಅರಸನು ನಿತ್ಯದಲ್ಲಿ ಮಾಡತಕ್ಕ ಕಾರ್ಯಗಳು ನಿರ್ಧರಿತವಾಗಿದ್ದವು. ಪ್ರತಿನಿತ್ಯ ೮ ಗಂಟೆಗಳ ವರೆಗೆ ಅರಸನಿಗೆ ರಾಜಕೀಯ ಕಾರ್ಯಗಳನ್ನು ನೋಡಬೇಕಾಗುತ್ತಿತ್ತು. ಅಭಿಷೇಕ ಮಂತ್ರಗಳಿಂದ ಅರಸನು ಯಾವಾಗಲೂ ಧರ್ಮ (Law) ಕ್ಕೆ ಅಧೀನನಿದ್ದನೆಂಬುದು ಗೊತ್ತಾಗುತ್ತದೆ. ನ್ಯಾಯಖಾತೆ ಮತ್ತು ಕಾರ್ಯನಿರ್ವಾಹಕ ಖಾತೆ ಇವು ಯಾವಾಗಲೂ ಪ್ರತ್ಯೇಕವಾಗಿದ್ದವು. ಅರಸನು ತನ್ನ ಮಂತ್ರಿಗಳನ್ನೊಡಗೂಡಿ ಕೊನೆಯ ನ್ಯಾಯಗಳನ್ನು ತೀರಿಸುತ್ತಿದ್ದನು. ಅರಸನೊಬ್ಬನಿಗೇ ಹಾಗೆ ತೀರ್ಪುಗಳನ್ನು ಕೊಡುವ ಅಧಿಕಾರವಿರಲಿಲ್ಲ. ಕಾಯದೆ ದೃಷ್ಟಿಯಿಂದ ಅರಸನಿಗೆ ಅನೇಕ ನಿರ್ಬಂಧಗಳು ಕಲ್ಪಿಸಲ್ಪಟ್ಟಿದ್ದರೂ ನೈತಿಕ ದೃಷ್ಟಿಯಿಂದ ಆತನೇ ವರಿಷ್ಠನು. ಒಟ್ಟಿಗೆ ರಾಜಧರ್ಮವು ಎಲ್ಲ ಧರ್ಮಗಳಲ್ಲಿ ಶ್ರೇಷ್ಠವಾದ ಧರ್ಮವು.

**ಸರ್ವಧರ್ಮಪರಂ ಕ್ಷಾತ್ರಂ ಲೋಕಶ್ರೇಷ್ಠಂ ಸನಾತನಂ।**

---

## ೧೨ನೆಯ ಪ್ರಕರಣ

# ಕಾಯದೆಗಳ ರಚನಾಪದ್ಧತಿ

**ವೇದೋಽಖಿಲೋ ಧರ್ಮಮೂಲಂ ಸ್ಮೃತಿಶೀಲೇಚ ತದ್ವಿದಾಮ್ ।**
**ಆಚಾರಶ್ಚೈವ ಸಾಧೂನಾಮಾತ್ಮನಸ್ತುಷ್ಟಿರೇವ ಚ ॥**

ಮನು. ಅ. ೨ ಶ್ಲೋ. ೬

**ಇದರ ವಿವರಗಳನ್ನು ಬದಿಯ ಪುಟದಲ್ಲಿ ನೋಡಿರಿ.**



# Republics.
## ೧೬ ಮಹಾಜನಪದ ಪ್ರಾಗ್ಬೌದ್ಧಕಾಲ



| ಜಾನಪದ. | ರಾಜಧಾನಿ. | ಈಗಿನ ಹೆಸರು. |
|---|---|---|
| ೧. ಮಗಧ | ರಾಜಗ್ರಹ | Rajgiri |
| ೨. ಕೋಶಲ | ಶ್ರಾವಸ್ತಿ | Sahet-Mahet |
| ೩. ವತ್ಸ (ವಂಶ) | ಕೌಶಾಂಬಿ | Kosam |
| ೪, ಕಾಶಿ | ಕಾಶಿ | Benares |
| ೫. ಅವಂತಿ | ಉಜ್ಜಯಿನಿ | Ujjaini |
| ೬. ಅಂಗ | ಚಂಪಾ | Bhagalpur |
| ೭. ಚೇದಿ | ಶುಕ್ತಿಮತಿ | Shuktisa |
| ೮. ಕುರು | ಇಂದ್ರಪ್ರಸ್ಥ | Dheli |
| ೯. ಮತ್ಸ್ಯ | ವಿರಾಟನಗರ | Bairat |
| ೧೦. ಶೂರಸೇನ | ಶುರಪುರ ಅಥವಾ ಮಥುರಾ | Agra or Mathura |
| ೧೧. ಪಾಂಚಾ (ಉತ್ತರ) | ಅಹಿಚ್ಛತ್ರ | Ahichatra Rama-nagar |
| ,, (ದಕ್ಷಿಣ) | ಕಾಂಪಿಲ್ಯ | Kampil |
| ೧೨. ಅಶ್ಮಕ | ಪೋಟಲಿನಗರಿ | Paithana |
| ೧೩. ಗಾಂಧಾರ | ತಕ್ಷಶಿಲಾ | Taxilla |
| ೧೪. ಕಾಂಬೋಜ | ದ್ವಾರಕಾ | Rajpur |
| ೧೫. ವೈಜ್ಜ್ಯನ ಮುಂತಾದ ೮ ರಾಜ್ಯಗಳು. | | 1. Vaisali<br>2. Janakpur |
| ೧೬. ಮಲ್ಲ | | |

**ಶ್ರುತಿಸ್ತು ವೇದೋ ವಿಜ್ಞೇಯೋ ಧರ್ಮಶಾಸ್ತ್ರಂ ತು ವೈ ಸ್ಮೃತಿಃ ॥**
**ತೇ ಸರ್ವಾರ್ಥೇಷ್ವಮೀಮಾಂಸ್ಯೇ ತಾಭ್ಯಾಂ ಧರ್ಮೋ ಹಿ ನಿರ್ಬಭೌ ॥**

ಮನು. ಅ. ೨ ಶ್ಲೋ. ೧೦

**ವೇದಃ ಸ್ಮೃತಿಃ ಸದಾಚಾರಃ ಸ್ವಸ್ಯ ಚ ಪ್ರಿಯಮಾತ್ಮನಃ**
**ಏತಚ್ಚತುರ್ವಿಧಂ ಪ್ರಾಹುಃ ಸಾಕ್ಷಾದ್ಧರ್ಮಸ್ಯ ಲಕ್ಷಣಂ ॥**

ಮನು. ಅ. ೨ ಶ್ಲೋ. ೧೨

ಪ್ರಾಚೀನ ಕಾಲದಲ್ಲಿ ಹಿಂದುಸ್ಥಾನದಲ್ಲಿ, ಸಮಾಜದ ಮೇಲೆ ಕಾಯದೆಯ ವರ್ಚಸ್ಸು ಇತ್ತು. ಪ್ರತಿಯೊಂದು ವ್ಯಕ್ತಿಯು ಕಾಯದೆಯಂತೆ ನಡೆಯಬೇಕಾಗುತ್ತಿತ್ತು. ಕಾಯದೆಯೆಂದರೆ ರಾಜ್ಯ ನಡಿಸುವ ಅಧಿಕಾರಿಗಳು ಮಾಡಿದ ಕಾಯದೆಗಳೆಂದು ಮಾತ್ರ ಆಗ ಅದಕ್ಕೆ ಅರ್ಥವಿರಲಿಲ್ಲ. ಆ ತರಹದ ಕಾಯದೆಗಳು ಆಗಿನ ಕಾಲದಲ್ಲಿ ಇರಲಿಲ್ಲ. ಆದರೆ, ಯಾವತ್ತು ಪ್ರಜೆಗಳು ಪಾಲಿಸತಕ್ಕ ನಿಯಮಗಳು ಕೆಲವು ಇದ್ದವು. ಅವುಗಳನ್ನು ಅವರು ಪಾಲಿಸದಿದ್ದರೆ ಅವರಿಗೆ ಒಂದಿಲ್ಲೊಂದು ಬಗೆಯ ಶಾಸನವೂ ಆಗುತ್ತಿತ್ತು. ಈ ನಿಯಮಗಳಿಗೆ ಆಗ 'ಧರ್ಮ'ವೆಂದು ಹೆಸರಿತ್ತು. ಈ ನಿಯಮಗಳು ಎರಡು ತರಹದವು. (೧) ನೈತಿಕ ಮತ್ತು ಧಾರ್ಮಿಕ ನಿಯಮಗಳು (೨) ವಿಧಾಯಕ ಕಾಯದೆಗಳು (Positive laws). ಮಿಕ್ಕ ಅನೇಕ ಪ್ರಾಚೀನ ಸಮಾಜಗಳಲ್ಲಿಯಂತೆ ಹಿಂದುಸ್ಥಾನದಲ್ಲಿಯೂ ಇವೆರಡೂ ತರಹದ ನಿಯಮಗಳ ವಿಚಾರವು ಪ್ರಾಚೀನ ಕಾಲದಲ್ಲಿ ಕೂಡಿಯೇ ಮಾಡಲ್ಪಡುತ್ತಿತ್ತು. ಆದರೆ ಅವೆರಡರಲ್ಲಿ ಭೇದವಿತ್ತೆಂಬ ಮಾತು ಅವರಿಗೆ ತಿಳಿದಿತ್ತೆಂಬುದಕ್ಕೆ ಸಂದೇಹವಿಲ್ಲ. ಏಕೆಂದರೆ ಮೊದಲನೆಯ ತರಹದ ನಿಯಮಗಳಿಗೆ ಧಾರ್ಮಿಕ ಅಥವಾ ಸಾಮಾಜಿಕ ಮಂಜೂರಿಯು ಬೇಕಾಗುತ್ತಿತ್ತು. ಮತ್ತು ಎರಡನೆಯ ತರಹದ ನಿಯಮಗಳಿಗೆ ರಾಜಕೀಯ ಮಂಜೂರಿಯು ಬೇಕಾಗುತ್ತಿತ್ತು. ಮುಂದೆ ಬರಬರುತ್ತ ಇವೆರಡು ನಿಯಮಗಳೊಳಗಿನ ಭೇದವು ಸ್ಪಷ್ಟವಾಗಿ ಲಕ್ಷದಲ್ಲಿ ಬಂದು, ವ್ಯಾವಹಾರಿಕ ಕಾಯದೆಗಳು ಬೇರೆ ಮಾಡಲ್ಪಟ್ಟವು. ಈ ತರಹದ ಕಾಯ

ದೆಗಳಿಗೆ ಈಗ ಇಂಗ್ಲಿಷದಲ್ಲಿ Secular laws (ಲೌಕಿಕ ಕಾಯದೆಗಳು) ಎಂದೆನ್ನುತ್ತಾರೆ.

ವೈದಿಕ ವಾಙ್ಮಯದಲ್ಲಿ ವಿಧಾಯಕ ಕಾಯದೆಗಳ ಸಂಬಂಧದಿಂದ ವಿಶೇಷ ವಿವರಗಳಿರುವುದಿಲ್ಲ. ನ್ಯಾಯಪ್ರಧಾನ ಸಂಬಂಧದ ಮೂಲತತ್ವಗಳೆಂಬ ದೃಷ್ಟಿಯಿಂದ ಅವುಗಳಿಗೆ ಏನೂ ವ್ಯಾವಹಾರಿಕ ಮಹತ್ವವಿರುವುದಿಲ್ಲವೆಂದು ಶ್ರೀ. ಬಾನರ್ಜಿಯವರ ಅಭಿಪ್ರಾಯ. ತತ್ವತಃ ಹಿಂದೂ ಜನರ ನ್ಯಾಯಪದ್ಧತಿಯು ಈ ವಿಧಾಯಕ ಕಾಯದೆಗಳ ಮೇಲೆಯೇ ಕಟ್ಟಲ್ಪಟ್ಟಿದೆಂಬುದಕ್ಕೆ ಸಂದೇಹವಿಲ್ಲ. ಬಹಳ ಪ್ರಾಚೀನ ಧರ್ಮಶಾಸ್ತ್ರದೊಳಗಿನ ವಿಷಯಗಳು ಸೂತ್ರಬದ್ಧವಾಗಿ ಬರೆಯಲ್ಪಟ್ಟಿವೆ. ಮತ್ತು ಅದರಲ್ಲಿಯ ಸ್ವಲ್ಪ ಭಾಗವು ಮಾತ್ರವೇ ಈಗ ಉಪಲಬ್ಧವಿದೆ. ಅವುಗಳಿಗೆ ಧರ್ಮಸೂತ್ರಗಳೆಂದು ಹೆಸರು. ಅವು ಕ್ರಿ. ಪೂರ್ವದ ೧೦ನೆಯ ಶತಮಾನದಿಂದ ಕ್ರಿ. ಪೂರ್ವದ ೫ನೆಯ ಶತಮಾನದ ಮಧ್ಯಕಾಲದಲ್ಲಿ ರಚಿಸಲ್ಪಟ್ಟಿರಬೇಕು. ಮುಂದೆ, ಈ ಸೂತ್ರಗಳ ಮೇಲಿಂದ, ಶ್ಲೋಕಬದ್ಧರೂಪದಲ್ಲಿ ಧರ್ಮಶಾಸ್ತ್ರಗಳು ರಚಿತವಾಗಿರಬೇಕು. ಹೀಗೆ ಮೂಲಸ್ವರೂಪವನ್ನು ಬದಲುಮಾಡುವಾಗ, ಅವುಗಳಲ್ಲಿ ಎಷ್ಟೋ ಹೊಸ ಸಂಗತಿಗಳು ಸೇರಿಸಲ್ಪಟ್ಟಿವೆ. ಅದೇ ಮೇರೆಗೆ ಕಾಲಾಂತರದಲ್ಲಿ, ಧರ್ಮಶಾಸ್ತ್ರವನ್ನು ಪ್ರತಿಪಾದಿಸುವ ಗ್ರಂಥಗಳಲ್ಲಿಯೂ ಎಷ್ಟೋ ಹೆಚ್ಚುಕಡಿಮೆಗಳಾಗಿರಬೇಕು.

ಸರ್ವಧರ್ಮಶಾಸ್ತ್ರ ಗ್ರಂಥಗಳಲ್ಲಿ, ಮನು ಮತ್ತು ಯಾಜ್ಞವಲ್ಕ್ಯ ಇವು ವಿಶೇಷ ಪ್ರಸಿದ್ಧವಾಗಿವೆ. ಮೊದಲು ಯಾಜ್ಞವಲ್ಕ್ಯ ಸ್ಮೃತಿಯಲ್ಲಿ ಮುಂದೆ ಹೇಳಿದ ಧರ್ಮಶಾಸ್ತ್ರಕಾರರ ಮತ್ತು ಸೂತ್ರಕಾರರ ಹೆಸರುಗಳು ದೊರೆಯುತ್ತವೆ, ಅವರ ಕಾಲಗಳೂ ಕೊಡಲ್ಪಟ್ಟಿವೆ.

| ನಂಬರು | ಧರ್ಮಶಾಸ್ತ್ರಕಾರರ ಹೆಸರು | ಡಾ ಗೌರ ಇವರ ಅಭಿಪ್ರಾಯದಂತೆ ಅವರ ಕಾಲ | |
|---|---|---|---|
| ೧ | ಮನು | ೮೦೦ ಇ. ಪೂ. | ಮಾನವ ಧರ್ಮಶಾಸ್ತ್ರಗ್ರಂಥ |
| ೨ | ಅತ್ರಿ | ಗೊತ್ತಿಲ್ಲ. | |

| | | | |
|---|---|---|---|
| ೩ | ವಿಷ್ಣು | ೩೦೦-೪೨೦ ಇ. ಪೂ. | ಕೃಷ್ಣ ಯಜುರ್ವೇದದ ಕಠಶಾಖೆಯು |
| ೪ | ಹಾರೀತ | ೮೫೦. ಇ. ಪೂ. | ಕೃಷ್ಣ ಯಜುರ್ವೇದಿ |
| ೫ | ಯಾಜ್ಞವಲ್ಕ್ಯ | ೩೫೦. ಇ. ಪೂ. | ಮಿಥಿಲಾಪ್ರಾಂತದಲ್ಲಿಯ ತ್ರಿಭುಕ್ತಿಯವನು |
| ೬ | ಉಶನಸ್ | ,, | |
| ೭ | ಅಂಗಿರಾ | ಗೊತ್ತಿಲ್ಲ | |
| ೮ | ಯಮ | ,, | |
| ೯ | ಆಪಸ್ತಂಬ | ೫೦೦ ಇ. ಪೂ. | |
| ೧೦ | ಸಂವರ್ತ | ,, | |
| ೧೧ | ಕಾತ್ಯಾಯನ | ೪೦೦ ಇಸ್ವಿ | |
| ೧೨ | ಬೃಹಸ್ಪತಿ | ೨೦೦ ಇಸ್ವಿ | |
| ೧೩ | ಪರಾಶರ | | |
| ೧೪ | ವ್ಯಾಸ | | |
| ೧೫ | ಶಂಖ | ಇವರ ಕಾಲವು ಗೊತ್ತಿಲ್ಲ. | |
| ೧೬ | ಲಿಖಿತ | | |
| ೧೭ | ದಕ್ಷ | | |
| ೧೮ | ಗೌತಮ | ೭೫೦ ಇ. ಪೂ. | |
| ೧೯ | ಶಾತಾತಪ | ——— | |
| ೨೦ | ವಸಿಷ್ಠ | ಗೊತ್ತಿಲ್ಲ. | ಋಗ್ವೇದಿ |

ವಿಜ್ಞಾನೇಶ್ವರನು ಕೊಟ್ಟ ಈ ಪಟ್ಟಿಯು ಪೂರ್ಣ ಪಟ್ಟಿಯಲ್ಲ. ಸುಪ್ರಸಿದ್ಧ ಧರ್ಮಶಾಸ್ತ್ರಕಾರನಾದ ನಾರದನ ಉಲ್ಲೇಖವು ಅದರಲ್ಲಿ ಇಲ್ಲ.

ಯಾಜ್ಞವಲ್ಕ್ಯ ೧-೪-೫

| | | |
|---|---|---|
| ೧ | ಬೌಧಾಯನ | |
| ೨ | ಭೃಗುಸಂಹಿತಾ | ೨೦೦ ಇಸ್ವಿ |
| ೩ | ನಾರದ | ೪೦೦ ಇಸ್ವಿ |
| ೪ | ಬೃಹಸ್ಪತಿ (ಮತ್ತೊಬ್ಬವ) | ೫೦೦ ,, |
| ೫ | ಅಂಗಿರಾ (ಮತ್ತೊಬ್ಬವ) | ೧೦೦೦-೧೧೦೦ |

೬ ಶಂಖಲಿಖಿತ

೭ ಆಶ್ವಲಾಯನ

೮ ಬೃಹತ್ ಶೌನಕ

೯ ಸಾಂಖ್ಯಾಯನ

## ಮಾನವ ಧರ್ಮಶಾಸ್ತ್ರದ ಮೇಲಿನ ಟೀಕಾಕಾರರು.

| ಭಾಷ್ಯಕಾರ | ಕಾಲ |
| --- | --- |
| ೧ ಮೇಧಾತಿಥಿ | ೯೦೦ ಇಸ್ವಿ |
| ೨ ಧರಣೀಧರ | |
| ೩ ಗೋವಿಂದರಾಜ | ,, |
| ೪ ಭಾರುಚಿ | ಉಪಲಬ್ಧವಿಲ್ಲ |
| ೫ ಶ್ರೀಕರ | ,, |
| ೬ ಕುಲ್ಲೂಕ ಧರ್ಮಸಾರ (ಕಾಶೀ) | ೧೪೦೦ ಇಸ್ವಿ |

ನಾರದ ಧರ್ಮಶಾಸ್ತ್ರದ ಮೇಲೆ ಅಸಹಾಯ ಎಂಬವನು ಭಾಷ್ಯ ಮಾಡಿರುವನು. ಆದರೆ ಮೂಲಗ್ರಂಥವು ಉಪಲಬ್ಧವಿಲ್ಲ.

## ಯಾಜ್ಞವಲ್ಕ್ಯದ ಮೇಲಿನ ಟೀಕಾಕಾರರು.

| | |
| --- | --- |
| ೧ ವಿಶ್ವರೂಪ | ಗೊತ್ತಿಲ್ಲ. |
| ೨ ಮಿತಾಕ್ಷರಾ (ವಿಜ್ಞಾನೇಶ್ವರನು ಮಾಡಿದ್ದು) | ೧೧೫೦ |
| ೩ ಅಪರಾರ್ಕ ಅಥವಾ ಅಪರಾದಿತ್ಯದೇವ | ೧೧೮೩ |

ಪ್ರಾಚೀನ ಧರ್ಮಶಾಸ್ತ್ರಕಾರರಲ್ಲಿ ಗೌತಮಮುನಿಯು ಹೇಳುವುದೇನೆಂದರೆ:- ಕಾಯದೆಯ ಉಗಮಸ್ಥಾನಗಳು ಮುಖ್ಯತಃ ಎರಡು. (೧) ವೇದಗಳು (೨) ತದುದಿತ ಧರ್ಮದಂತೆ ಆಚರಿಸುವವರ ಮತಗಳು. ಕಾಯದೆಯ ಉಗಮಸ್ಥಾನ ಮತ್ತು ಆ ಬಗ್ಗೆ ಋಷಿಗಳ ಅಭಿಪ್ರಾಯ ಇವುಗಳನ್ನು ಮುಂದೆ ಕೊಟ್ಟಿದೆ.

ಶ್ರುತಿ ಮತ್ತು ಸ್ಮೃತಿ ಇವೇ ಕಾಯದೆಯ ಮುಖ್ಯ ಮೂಲಗಳು. ಇವಲ್ಲದೆ ಮೂರನೆಯ ಮತ್ತು ಒಂದು ದೃಷ್ಟಿಯಿಂದ ಅತ್ಯಂತ ಮಹತ್ವದ ಮತ್ತೊಂದು ಉಗಮಸ್ಥಾನವೆಂದರೆ ಶಿಷ್ಟಸಮ್ಮತವಾದ ರೂಢಿಗಳು. ಈ ವಿಷಯದಲ್ಲಿ ಆಪಸ್ತಂಬನು ಹೇಳುವುದೇನೆಂದರೆ:– ವೇದಗಳಿಂದಲೆ ಧರ್ಮಶಾಸ್ತ್ರದ ಸಂಪೂರ್ಣ ಜ್ಞಾನವಾಗುವುದು ಕಠಿಣವಿರುತ್ತದೆ. ಆದರೆ ಅವುಗಳೊಳಗಿನ ವಚನಗಳ ಅನುರೋಧದಿಂದ ಹಾಗೆ ತಿಳಿದುಕೊಳ್ಳಲು ಸಾಧ್ಯವಿದೆ. ಈ ಸೂಚನಾತ್ಮಕ ಸಾಧನಗಳೆಂದರೆ ಶಿಷ್ಟಜನರ ಆಚಾರಗಳು.

## ರೂಢಿಗಳು ಅನೇಕ ಪ್ರಕಾರದವಿರುತ್ತವೆ.

(೧) ಸರ್ವಸಾಧಾರಣವಾಗಿ, ಇಡೀ ಸಮಾಜದಲ್ಲಿ ಪ್ರಚಾರದಲ್ಲಿ ಇದ್ದವುಗಳು.

(೨) ವಿಶಿಷ್ಟ ಗಣಗಳಲ್ಲಿ ಪ್ರಚಾರದಲ್ಲಿದ್ದವುಗಳು.

(೩) ವ್ಯಾಪಾರಸ್ಥರು, ಕುಶಲ ಕೈಗಾರಿಕೆಯ ಕೆಲಸಮಾಡುವವರು, ಒಕ್ಕಲಿಗರು ಇವೇ ಮುಂತಾದವರಲ್ಲಿ ಪ್ರಚಾರವಿದ್ದವುಗಳು.

(೪) ವಿಶಿಷ್ಟ ಕುಟುಂಬಗಳಲ್ಲಿ ಪ್ರಚಾರದಲ್ಲಿದ್ದ ರೂಢಿಗಳಿಗೆ ಎಷ್ಟು ಮಟ್ಟಿಗೆ ಮಹತ್ವವನ್ನು ಕೊಡಬೇಕೆಂಬ ಬಗ್ಗೆ ಮತಭೇದವಿತ್ತು.

ಸಾರಾಂಶ, ಹಿಂದಿನ ಕಾಲದಲ್ಲಿ ರೂಢಿಗಳಿಗೆ ಬಹಳ ಮಾನವಿತ್ತು. ಈಗಲೂ ಕೂಡ, ಕಾಯದೆಗಳಲ್ಲಿ ಪರಂಪರಾಗತ ರೂಢಿಗಳಿಗೆ ಬಹಳ ಗೌರವವು ಕೊಡಲ್ಪಡುತ್ತಿದೆ. ಪ್ರಚಾರದಲ್ಲಿ ಬರಬೇಕಾದರೆ ಅವುಗಳ ಮೂಲದಲ್ಲಿ ಕೆಲವು ಯೋಗ್ಯ ಕಾರಣಗಳು ಇದ್ದೇ ಇರುತ್ತವೆ. ಅಂಥರಾಗಿ ಯಾರೂ ಹೊಸ ಆಚಾರಗಳನ್ನು ಸ್ವೀಕರಿಸುವುದಿಲ್ಲ. ಆದರೆ ಮುಂದೆ ಬರಬರುತ್ತ ಆ ಕಾರಣಗಳನ್ನು ಜನರು ಮರೆತು ಬಿಡುತ್ತಾರೆ, ಆದರೂ ಆ ಆಚಾರಗಳನ್ನು ಪಾಲಿಸುತ್ತಿರುತ್ತಾರೆ, ಅವುಗಳ ವಿಷಯವಾಗಿ ಅವರಲ್ಲಿ ಪರಾಜ್ಯಬುದ್ಧಿಯೂ ಹುಟ್ಟುತ್ತದೆ. ಇರಲಿ.

**ಗೌತಮ**

೧ ನಾಲ್ಕು ವೇದಗಳು

೨ ವೈದಿಕ ಸಂಸ್ಥೆಗಳ ಇತಿಹಾಸ; ಮತ್ತು ಅವುಗಳ ದಿನಚರ್ಯೆ; (ಸ್ಮೃತಿ) ಧರ್ಮಶಾಸ್ತ್ರ; ಅಂಗ (ವೇದಗಳ) ಪುರಾಣಗಳು ಮತ್ತು ವಿಶಿಷ್ಟ ರೂಢಿಗಳ ಸಹಾಯದಿಂದ ನ್ಯಾಯಪ್ರದಾನದ ಕಾರ್ಯ ಮಾಡಬೇಕು

**ಬೋಧಾಯನ**

೧ ವೇದದೊಳಗಿನ ಧರ್ಮಶಾಸ್ತ್ರ

೨ ಸ್ಮೃತಿ

೩ ಶಿಷ್ಟಾಚಾರ

**ಆಪಸ್ತಂಬ**

೧ ವೇದ

೨ ಶಾಸ್ತ್ರಜ್ಞ ಪುರುಷರು ಬಹುಮತದಿಂದ ನಿರ್ಣಯಿಸಿದ ಸಿದ್ಧಾಂತ.

**ಮನು ಮತ್ತು ಯಾಜ್ಞವಲ್ಕ್ಯ**

೧ ವೇದ

೨ ಸ್ಮೃತಿ

೩ ಸದಾಚಾರ

೪ ತನ್ನ ಸ್ವಂತಕ್ಕೆ ಪ್ರಿಯವಾದುದು

ಈ ನಾಲ್ಕು ಅಲ್ಲದೆ ಯಾಜ್ಞವಲ್ಕ್ಯನು ಮತ್ತೂ ಕೆಲವು ಹೇಳಿರುವನು.

೫ ಚಿಂತನ

೬ ಪರಿಷತ್ತಿನ ಮತ್ತು ವೇದಜ್ಞರ ಮತ

೭ ಪುರಾಣ

೮ ನ್ಯಾಯ

೯ ಮೀಮಾಂಸೆ

೧೦ ಧರ್ಮಶಾಸ್ತ್ರ

೧೧ ಕರ್ತವ್ಯಕ್ಕೆ ಸುಸಂಗತವಿರುವ ತಾತ್ಪೂರ್ತಿಕ ಅವಶ್ಯಕತೆ

೧೨ ರಾಜನ ಆಜ್ಞಾಪತ್ರ

೧೩ ಶ್ರೇಣಿ, ಸಂಘ ಮುಂತಾದ ವ್ಯಾಪಾರೀ ಸಂಸ್ಥೆಗಳ ವಿಶಿಷ್ಟ ರೂಢಿಗಳು

ಯಾವತ್ತು ರೂಢಿಗಳು ಮನ್ನಿಸಲ್ಪಡಬೇಕೆಂದು ಬೌಧಾಯನನು ಹೇಳುತ್ತಾನೆ. ಆದರೆ ಪರಂಪರೆಗೆ ಸಮ್ಮತವಿಲ್ಲದ ರೂಢಿಗಳಿಗೆ ಮಹತ್ವಕೊಡಬಾರದೆಂದು ಅನೇಕ ಪಂಡಿತರ ಅಭಿಪ್ರಾಯ. ರೂಢಿಗಳು ಅತ್ಯಂತ ಅನೀತಿವಂತವಿದ್ದರೆ ಮಾತ್ರ ಅವು ಮನ್ನಿಸಲ್ಪಡುತ್ತಿದ್ದಿಲ್ಲ; ಮಿಕ್ಕವುಗಳನ್ನು ಮನ್ನಿಸುವದರ ಕಡೆಗೇ ಪ್ರವೃತ್ತಿ ಹೆಚ್ಚು.

ನಿರ್ಣಯ ಕೊಡಲಿಕ್ಕೆ ಬಾರದ ಸಂಗತಿಗಳ ವಿಷಯದಲ್ಲಿ ತಮಗೆ ಪ್ರಿಯ ತೋರಿದಂತೆ ನಡೆಯಬೇಕೆಂದು ಹೇಳಿರುವುದಕ್ಕೆ ಕಾಯದೆಯ ಉಗಮಸ್ಥಾನವೆನ್ನುವುದಕ್ಕಿಂತ ಅಂಥ ಪ್ರಸಂಗದಲ್ಲಿ ಮನುಷ್ಯನು ಏನು ಮಾಡಬೇಕೆಂಬ ಬಗ್ಗೆ ಅದೊಂದು ಸಾಮಾನ್ಯ ನಿಯಮವೆಂದು ಹೇಳುವುದು ಸರಿಗಾಣುತ್ತದೆ. ಅಂಥ ಪ್ರಸಂಗಗಳಲ್ಲಿ ಮನುಷ್ಯನು ತನ್ನ ಸದಸದ್ವಿವೇಕ ಬುದ್ಧಿಯು ಹೇಳಿದಂತೆ ನಡೆಯಬೇಕು. ಹಾಗೆ ನಡೆಯುವುದು ಮನುಷ್ಯನದೊಂದು ನೈಸರ್ಗಿಕ ಹಕ್ಕು. ಈ ನೈಸರ್ಗಿಕ ಹಕ್ಕೇ ಕಾಯದೆಯ ಉಗಮಸ್ಥಾನಗಳಲ್ಲೊಂದು.

ಯಾಜ್ಞವಲ್ಕ್ಯನು ಮೀಮಾಂಸೆ ಮತ್ತು ನ್ಯಾಯ ಇವು ಕಾಯದೆಯ ಗೌಣ ಉಗಮಸ್ಥಾನಗಳೆಂದು ಹೇಳುತ್ತಾನೆ. ಅವುಗಳ ಉಪಯೋಗವು ಧರ್ಮಶಾಸ್ತ್ರದ ನಿಯಮಗಳಿಗೆ ಅರ್ಥ ಹಚ್ಚುವಾಗ ಚೆನ್ನಾಗಿ ಆಗುತ್ತದೆ. ಆದಕಾರಣ ಅವುಗಳಿಗೆ ಉಗಮಸ್ಥಾನಗಳೆಂದು ಕರೆಯಲಿಕ್ಕೆ ಬರುವುದಿಲ್ಲ.

ತೀರ ಪ್ರಾಚೀನ ಕಾಲದಲ್ಲಿ ಈಗಿನಂತೆ ಕಾಯದೆಗಳನ್ನು ರಚಿಸುವ ಪದ್ಧತಿಯು ಇದ್ದಿಲ್ಲವೆಂಬುದು ನಿಜವು. ಆದರೆ ಇಂಥ ಪ್ರಸಂಗದಲ್ಲಿ ಹೀಗೇ ಆಚರಿಸಬೇಕೆಂಬುದು ಸ್ಪಷ್ಟವಾಗಿ ಜಾಹೀರುಮಾಡಲ್ಪಡುತ್ತಿತ್ತು. ಬೃಹದಾರಣ್ಯಕೋಪನಿಷತ್ತಿನಲ್ಲಿ ಸತ್ಯವೇ ಕಾಯದೆಯು, ಕಾಯದೆಯೆಂದರೆ ಸತ್ಯವು ಎಂದು ಹೇಳಿದೆ.

ಸಂಶಯಯುಕ್ತ ಸಂದರ್ಭಗಳಲ್ಲಿ ವಿಷಯಗಳನ್ನು ನಿರ್ಣಯಿಸುವುದಕ್ಕೆ ಧರ್ಮಶಾಸ್ತ್ರಜ್ಞರ ಅಧಿಕಾರಿಮಂಡಳವು ಸ್ಥಾಪಿಸಲ್ಪಡುತ್ತಿತ್ತು. ಅದಕ್ಕೆ ಪರಿಷತ್ತು ಎಂದು ಹೆಸರು. ಆದರಲ್ಲಿ ವಿದ್ವಾಂಸ

ರಾದ ಬ್ರಾಹ್ಮಣರಿರುತ್ತಿದ್ದರು. ಅದರಲ್ಲಿ, ವೇದಶಾಸ್ತ್ರಜ್ಞರೂ ತರ್ಕ ಶಾಸ್ತ್ರಜ್ಞರೂ ನಿಪುಣರೂ ಲೋಭವಿರಹಿತರೂ ಆದ ೧೦ ಜನ ಬ್ರಾಹ್ಮಣರಿರಬೇಕೆಂದು ಗೌತಮನ ಮತ. (ಗೌತಮಸೂತ್ರ ೧೮-೪೮). ಬೌಧಾಯನನ ಮತವೇನೆಂದರೆ:- ಪ್ರತಿಯೊಂದು ವೇದವನ್ನು ಬಲ್ಲ ನಾಲ್ಕು ಜನ ಪಂಡಿತರು, ಒಬ್ಬ ಮೀಮಾಂಸಕ, ಷಡಂಗಗಳನ್ನು ಬಲ್ಲವನೊಬ್ಬ, ಒಬ್ಬ ಧರ್ಮಶಾಸ್ತ್ರಜ್ಞ, ಮತ್ತು ಮೂರು ಆಶ್ರಮಗಳನ್ನು ಅನುಸರಿಸುವ ಮೂವರು ವಿದ್ವಾಂಸರು ಹೀಗೆ ೧೦ ಬ್ರಾಹ್ಮಣರಿರಬೇಕು. ಆದರೆ ಈ ತರಹದ ಬ್ರಾಹ್ಮಣರು ಸಿಗುವುದು ಸಹಸಾ ಶಕ್ಯವಿಲ್ಲದ್ದರಿಂದ ೩-೪ ಜನರಿದ್ದರೂ ಪರಿಷತ್ತಿನ ಕಾರ್ಯವು ನಡೆಯುತ್ತಿತ್ತು. ಆದರೆ ಅವರು ಜನರ ವಿಶ್ವಾಸಕ್ಕೆ ಪಾತ್ರರಾದವರೂ ಸನ್ಮಾನನೀಯರಾದವರೂ ಇರಬೇಕು (ಬೌ. ಸೂತ್ರ ೧-೧-೯). ಸಾವಿರಾರು ಮೂರ್ಖರು ಕೊಟ್ಟ ನಿರ್ಣಯಕ್ಕಿಂತಲೂ ೩-೪ ವಿದ್ವಾಂಸರು ಕೊಟ್ಟ ನಿರ್ಣಯವೇ ಮೇಲೆಂದು ವಸಿಷ್ಠನು ಹೇಳುತ್ತಾನೆ. ಪ್ರಾಚೀನ ಕಾಲದ ಇಂಥ ಪರಿಷತ್ತಿಗೆ ಒಂದು ರೀತಿಯಿಂದ ಕಾಯದೆಮಂಡಲವೆಂದು ಕರೆಯಬಹುದು. ಅದರ ಸದಸ್ಯರ ಮುಖ್ಯ ಕೆಲಸವು ಹೊಸ ಕಾಯದೆಗಳನ್ನು ರಚಿಸುವುದು ಇದ್ದಿಲ್ಲ; ಧರ್ಮಶಾಸ್ತ್ರಗಳಿಗೆ ಸರಿಯಾದ ಅರ್ಥವನ್ನು ಹಚ್ಚುವುದೇ ಅವರ ಕೆಲಸ. ಆದರೂ ಹೀಗೆ ಅರ್ಥ ಹಚ್ಚುವಾಗ ಅವರು ದೇಶಕಾಲ ಪರಿಸ್ಥಿತಿಗಳನ್ನು ಲಕ್ಷ್ಯಕ್ಕೆ ತಂದು, ಪರ್ಯಾಯದಿಂದ ಹೊಸ ಕಾಯದೆಗಳನ್ನು ರೂಢಿಯಲ್ಲಿ ತರುತ್ತಿದ್ದರು. ಟೀಕಾಕಾರರೂ ಹೀಗೆ ಹೊಸ ಅರ್ಥವನ್ನು ಹಚ್ಚುತ್ತಿದ್ದರು. ಆದರೆ, ಮುಂದೆ ಬರಬರುತ್ತ ಹೀಗೆ ಅಪ್ರತ್ಯಕ್ಷ ರೀತಿಯಿಂದ ಕಾಯದೆಗಳನ್ನು ಬದಲುಮಾಡುವ ಪದ್ಧತಿಯು ಅಷ್ಟೊಂದು ಸಮಂಜಸವಾಗಿ ತೋರಲಿಲ್ಲ. ಮೂಲತಃ ರಾಜನಿಗೆ ದೇಶಕ್ಕೋಸ್ಕರ ಕಾಯದೆಗಳನ್ನು ಮಾಡುವ ಅಧಿಕಾರವಿದ್ದಿಲ್ಲ. ಆದರೆ, ಸಮಾಜವು ಬೆಳೆದಂತೆ ಅರಸನಿಗೆ ಅನೇಕ ಪ್ರಸಂಗಗಳಲ್ಲಿ ಆಜ್ಞೆಗಳನ್ನು ಕೊಡುವ ಪ್ರಸಂಗವು ಬರುತ್ತಿತ್ತು. ಈ ಆಜ್ಞೆಗಳೇ ಒಂದು ಪ್ರಕಾರದ ಕಾಯದೆಗಳೆನ್ನಿಸಿಕೊಳ್ಳಲ್ಪಡುತ್ತಿದ್ದವು. ರಾಜನ ಆಜ್ಞೆಗಳು ಡಂಗುರಹೊಡೆದು ಜನರಿಗೆ ತಿಳಿಸಲ್ಪಡುತ್ತಿದ್ದವು.

ಇದರ ವಿವರಗಳನ್ನು ಬದಿಯ ಪುಟದಲ್ಲಿ ಓದಿರಿ.



## ಕ್ರಿ. ಪೂ. ೪ನೆಯ ಶತಮಾನದ ಪ್ರಜಾಸತ್ತಾತ್ಮಕ ಮತ್ತು ಅರಸುರಾಜ್ಯಗಳು.

ಹಿಂದಿನ ಮೆಸಿಡೋನಿಯನ್ ಹೆಸರುಗಳೂ
ಅವುಗಳ ಈಗಿನ ಸ್ಥಾನಗಳೂ.

**ಗಣರಾಜ್ಯಗಳು** (Republics) (೧) ಅಸ್ಪೇಶಿಯನ್ (ಕಾಬೂಲದ ಉತ್ತರಕ್ಕೆ) ೨. ಗುರಾಕನ್ಸ (ಪಂಚಕೋರ ನದಿಯ ಹತ್ತರ) ೩. ಅಸಾಕೆನಸ್ (ಮಾರ್ಕಂಡದ ಉತ್ತರಕ್ಕೆ ಅಶ್ಮಕ) ೪. ಪೆಂಕೆಲೋಟಿಸ್ (ಕಾಬೂಲ ನದಿಯ ಮೇಲೆ ಪುಷ್ಕಲಾವತಿ ೫. ನ್ಯಸ (ಮಾವುಂಟ ಕೋಹಿನೋದ ಮೇಲೆ) ೬. ಗ್ಲೋಗ್ಯಾನಿಸಿಕಸ್ (ಗುಜರಾಥದ ಹತ್ತರ) ೭. ಕಠಾಯೋಯಿ (ಜೆಲಂ ಮತ್ತು ಚಿನಾಬದ ನಡುವೆ) ೮. ಸೊಫಿಟಸ್ (ಜೆಲಂದದಿಂದ ಸಿಂಧುನದದ ವರೆಗಿನ ಉಪ್ಪಿನ ಪ್ರದೇಶ) ಫಿಗಿಲಸ್ (ರವಿ ಮತ್ತು ಬಿಯಾನದಿಗಳ ನಡುವಿನ ಭಾಗ) ೧೦. ಸುದ್ರೆಕಾಕ್ ಬಿಯಾ ನದಿಯ ಮೇಲೆ) ೧೧. ಮಲ್ಲೋಯಿ (ರವಿನದಿಯ ಮೇಲೆ) (೧೨) ಅಬಸ್ಟನೊಯಿ (ಅಂಬಷ್ಟ) ಅಂಬಾಲಾ ೧೩. ಕ್ಸಥೋರಿ ಮತ್ತು ಬಸಡೋಯಿ ಸತಲಜ ನದಿಯ ಹತ್ತರ ೪. ಸೆವಾದ್ರಾಯಿ ಮತ್ತು ಮಾಸನೋಯಿ (ಸಿಂಧುನದದ ಹತ್ತರ) ೧೫. ಮೌಸಿಕಾನಸ್ ಸಿಂಧುದೇಶ ೧೬. ಆಕ್ರಿಕ್ಯಾನಸ್ (ಲಾಡಖಾನದ ಹತ್ತರ) ೧೭. ಸಾಂಬೋಸ್ (ಶೆಹವಾನದ ಹತ್ತರದ ಗುಡ್ಡದ ಪ್ರದೇಶ) ೧೮. ಪಟಲೆಂಕ ಹೈದ್ರಾಬಾದದ ಹತ್ತರ)

### ಅರಸುರಾಜ್ಯಗಳು (Kingdoms)

೧. ಟಿಕ್ಸಿಲ (ಸಿಂಧು ಮತ್ತು ಕೋಲಂದ ನಡುವೆ) ೨. ಅಭಿಸಾರ (ತಕ್ಷಶಿಲೆಯ ಉತ್ತರಕ್ಕೆ) ೩. ಅರಸಕೇಯುಸ್ (ಹಝುರಾ; ೪ ಪೋರಸ್ (ರೋಲಂ, ಗುಜರಾಥ ಮತ್ತು ಶಹಪುರ ಜಿಲ್ಹೆಗಳು ೫.. ಗಂಡಾರಿಸ್ ಚಿನಾಬ ಮತ್ತು ರವಿ ಇವುಗಳ ನಡುವಿನ ಪ್ರದೇಶ ೬. ಅಡ್ರಿಯಾಸ್ಟಿಸ್ (ಗಂಡಾರಿಸದ ಪೂರ್ವಕ್ಕೆ) ೭. ಸಿಬೋಯಿ (ಝುಂಗದಲ್ಲಿ ಶೋರಕೋಟ) ೮. ಆಗಲಾಸೋಯಿ (ಸಿಬೋಯಿಯ ಹತ್ತರ)

ಅವುಗಳನ್ನು ಮುಖ್ಯ ಮುಖ್ಯ ಸ್ಥಳಗಳಲ್ಲಿ ಬರೆದು ಹಚ್ಚತಕ್ಕದ್ದೆಂದು ಶುಕ್ರನೀತಿಯಲ್ಲಿ ಹೇಳಿದೆ.

ಆದರೆ ರಾಜನು ತನ್ನ ಸ್ವಂತ ಜವಾಬದಾರಿಯ ಮೇಲಿಂದ ಯಾವ ಆಜ್ಞೆಯನ್ನೂ ಕೊಡಕೂಡದೆಂದೂ ಮಂತ್ರಿಪರಿಷತ್ತಿನ ಅನುಮತಿಯಿಂದಲೇ ಆತನು ಆಳತಕದ್ದೆಂದೂ ನಿಯಮವಿತ್ತು. ಆದಕಾರಣ, ಪರ್ಯಾಯದಿಂದ ಈ ಕಾಯುದೆಗಳು ಜನತೆಯ ಸಮ್ಮತಿಯಿಂದ ಮಾಡಲ್ಪಟ್ಟ ಕಾಯುದೆಗಳೇ ಎಂದು ಹೇಳಬಹುದು.

ಧರ್ಮಸೂತ್ರಕಾರರೂ, ಧರ್ಮಶಾಸ್ತ್ರವನ್ನು ಪ್ರತಿಪಾದಿಸುವ ಮಿಕ್ಕ ಗ್ರಂಥಕರ್ತರೂ, ಮತ್ತು ರಾಜನೀತಿಶಾಸ್ತ್ರದ ಕರ್ತರೂ ಅರಸನು ತನ್ನ ಸಹಾಯಕರ ಮತ್ತು ಮಂತ್ರಿಮಂಡಳದ ಸಹಕಾರಿತೆ ಮತ್ತು ಸಮ್ಮತಿಯ ಹೊರತು ಯಾವ ಕೆಲಸವನ್ನೂ ಮಾಡಬಾರದೆಂಬ ಮಹತ್ವದ ತತ್ವವನ್ನು ಏಕಕಂಠದಿಂದ ಪ್ರತಿಪಾದಿಸಿರುತ್ತಾರೆ. ಯಾರ ಸಹಾಯವನ್ನೂ ತೆಗೆದುಕೊಳ್ಳದೆ ರಾಜ್ಯಕಾರಭಾರವನ್ನು ನಡಿಸುವ ಅರಸನು ಅಯೋಗ್ಯನೂ ಮೂರ್ಖನೂ ಇರುತ್ತಾನೆಂದು ಮನುವು ಸ್ಪಷ್ಟವಾಗಿ ಹೇಳಿದ್ದಾನೆ. ಯಾಜ್ಞವಲ್ಕ್ಯನು ಕೂಡ ಅರಸರಿಗೆ ಇದೇ ಬಗೆಯ ಎಚ್ಚರಿಕೆಯನ್ನು ಕೊಟ್ಟಿರುವನು. (ಯಾಜ್ಞ. ೧. ೩೧೧). ಮಂತ್ರಿಗಣ (Cabinet) ಮತ್ತು ಮಂತ್ರಿಪರಿಷತ್ತು (Council) ಗಳನ್ನು ಒಂದೆಡೆಗೆ ಕೂಡಿಸಿ ಅವರು ಬಹುಮತದಿಂದ ನಿರ್ಣಯಿಸಿದಂತೆ ಅರಸನು ನಡೆಯತಕ್ಕದ್ದೆಂದು ಕೌಟಿಲ್ಯನು ಹೇಳುತ್ತಾನೆ (ಅರ್ಥ ೧-೧೫-೧೧). ಮತ್ತೊಂದು ಮಹತ್ವದ ಮಾತೇನೆಂದರೆ ಮಂತ್ರಿ ಪರಿಷತ್ತಿನವರು ಬಹುಮತದಿಂದ ನಿರ್ಣಯಿಸಿದ ಯಾವ ಮಾತನ್ನೂ ಅರಸನಿಗೆ ಕೇವಲ ತನ್ನ ಅಧಿಕಾರಬಲದಿಂದ ತೆಗೆದುಹಾಕಲಿಕ್ಕೆ ಬರುತ್ತಿದ್ದಿಲ್ಲ. ಅಂದರೆ ಅರಸನಿಗೆ ಆಗಿನ ಕಾಲದಲ್ಲಿ Vetoing power ನಿಷೇಧಿಸುವ ಅಧಿಕಾರವಿದ್ದಿಲ್ಲ. ಆದರೆ ಶ್ರೀ. ರಾಧಾಗೋವಿಂದ ವಾಸಕ ಇವರು ಸುದರ್ಶನ ಸರೋವರದ ಖರ್ಚಿನ ಸಂಬಂಧದ ಪ್ರಶ್ನೆಯ ಉದಾಹರಣೆಯನ್ನು ಕೊಟ್ಟು, ಕೆಲವೊಮ್ಮೆ ಅರ

ಸರು ಆ ತರಹದ ಅಧಿಕಾರವನ್ನು ಉಪಯೋಗಿಸುತ್ತಿದ್ದರೆಂದು ಹೇಳುತ್ತಾರೆ. ಆದರೆ ಇಷ್ಟು ಮಾತ್ರ ನಿಜ. ಅದೇನೆಂದರೆ ಅರಸನು ತಾನೊಬ್ಬನೇ ಸಿಕ್ಕಸಿಕ್ಕಂತೆ ವರ್ತಿಸಬಾರದೆಂಬ ತತ್ತ್ವವು ಒತ್ತಿ ಒತ್ತಿ ಪ್ರತಿಪಾದಿಸಲ್ಪಟ್ಟಿದೆ. ಶುಕ್ರನೀತಿಯಲ್ಲಿ ಈ ವಿಷಯವಾಗಿ ಹೀಗೆ ಹೇಳಿದೆ.

**ಸರ್ವವಿದ್ಯಾಸು ಕುಶಲೋ ನೃಪೋ ಹ್ಯಪಿ ಸುಮಂತ್ರವಿತ್ ।**
**ಮಂತ್ರಿಭಿಸ್ತುವಿನಾ ಮಂತ್ರಂ ನೈಕೋಽಯಂ ಚಿಂತಯೇತ್ ಕ್ವಚಿತ್।**
**ಪ್ರಭುಸ್ಸ್ವಾತಂತ್ರ್ಯಮಾಪನ್ನೋ ಹ್ಯನರ್ಥಾಯೈವ ಕಲ್ಪ್ಯತೆ ॥**

ಬೃಹಸ್ಪತಿಯಂತೂ ಅರಸನು ಯಾವುದೊಂದು ಯೋಗ್ಯಕಾರ್ಯವನ್ನು ಮಾಡುವುದನ್ನು ಕೂಡ ಪ್ರಧಾನನ ಸಲಹೆಯಿಂದಲೇ ಮಾಡಬೇಕೆಂದು ಹೇಳಿದ್ದಾನೆ.

ಸಾರಾಂಶ. ಹಿಂದಿನ ಕಾಲದಲ್ಲಿ ಈಗಿನಂತೆ ಪ್ರತ್ಯೇಕ ಕಾಯದೆ ಮಂಡಳಗಳಿರಲಿಲ್ಲ. ಆದರೂ ಅರಸನು ಅನಿಯಂತ್ರಿತನಾದ ಕಾಯದೆ ಕರ್ತನಾಗಿರಲಿಲ್ಲ.

---

## ೧೩ನೆಯ ಪ್ರಕರಣ

# ಮುಲಕಿ ರಾಜ್ಯವ್ಯವಸ್ಥೆ.

ಗ್ರಾಮಸಂಸ್ಥೆಯು ಮುಲಕಿ ರಾಜ್ಯವ್ಯವಸ್ಥೆಯ ನೆಲಗಟ್ಟು. ಈ ಗ್ರಾಮಸಂಸ್ಥೆಯು ವೈದಿಕ ಕಾಲದಷ್ಟು ಪ್ರಾಚೀನವು. ಆಡಳಿತದ ಅನುಕೂಲತೆಗೋಸ್ಕರ ದೇಶದಲ್ಲಿ (೧) ಜಾನಪದ ಮತ್ತು (೨) ನಾಗರ ಎಂದು ಎರಡು ವಿಭಾಗಗಳು ಮಾಡಲ್ಪಟ್ಟಿದ್ದವು. ಪ್ರತಿಯೊಂದು ಗ್ರಾಮವು ಸುಮಾರು ೨ ರಿಂದ ೪ ಚಚ್ಚೌಕು ಮೈಲು ಇರುತ್ತಿತ್ತು; ಮತ್ತು ಅದರ ಜನಸಂಖ್ಯೆ ೫೦೦ ರಿಂದ ೪೦೦೦ದ

ವರೆಗೆ ಇರುತ್ತಿತ್ತು. ಒಕ್ಕಲತನದವರೇ ವಿಶೇಷ. ಪ್ರತಿಯೊಂದು ಗ್ರಾಮದ ಸೀಮೆಯು ಇಲ್ಲಿಯ ವರೆಗೆ ಎಂದು ಗೊತ್ತುಪಡಿಸಲ್ಪಟ್ಟಿತ್ತು; ಮತ್ತು ಗ್ರಾಮ ಗ್ರಾಮಗಳಲ್ಲಿಯ ಸೀಮೆಯ ಸಂಬಂಧದ ತಂಟೆ ಗಳನ್ನು ತೀರಿಸುವುದಕ್ಕೆ ಒಬ್ಬ ಪ್ರತ್ಯೇಕ ಅಧಿಕಾರಿಯು ಇರುತ್ತಿದ್ದನು. ಆತನಿಗೆ ನೆರೆಹೊರೆಯ ಪಂಚಜನರು ಸಹಾಯ ಮಾಡುತ್ತಿದ್ದರು. ಗ್ರಾಮದ ಸೀಮೆಗಳ ಹದ್ದನ್ನು ಬದಲು ಮಾಡುವವರಿಗೆ ದಂಡವಾಗುತ್ತಿತ್ತು. ದನಕರುಗಳಿಗಾಗಿ ಪ್ರತಿಯೊಂದು ಗ್ರಾಮದಲ್ಲಿ ಕೆಲವು ಭೂಮಿಯು ಕಾದಿಡಲ್ಪಡುತ್ತಿತ್ತು. ಪ್ರತಿಯೊಂದು ಗ್ರಾಮವು ಆದಷ್ಟು ಮಟ್ಟಿಗೆ ತನ್ನ ಕೊರತೆಗಳನ್ನೆಲ್ಲ ತಾನೇ ಪೂರೈಸಿಕೊಳ್ಳಲಿಕ್ಕೆ ಸಮರ್ಥವಾಗಿತ್ತು. ಪಡಭೂಮಿಯನ್ನು ಸಾಗುಮಾಡುವವರಿಗೆ ಪ್ರೋತ್ಸಾಹನ ಕೊಡಲ್ಪಡುತ್ತಿತ್ತು.

೧೦ ಗ್ರಾಮಗಳು ಕೂಡಿ= ೧ ಸಂಗ್ರಹಣ; ೨೦ ಸಂಗ್ರಹಣಗಳು ಕೂಡಿ= ೧ ಖಾರ್ವಟಿಕ; ೨ ಖಾರ್ವಟಿಕ= ದ್ರೋಣಮುಖ; ೨ ದ್ರೋಣಮುಖ= ೧ ಸ್ಥಾನೀಯ ಅಂದರೆ, ಒಂದು ಸ್ಥಾನೀಯದಲ್ಲಿ ಸುಮಾರು ೮೦೦ ಗ್ರಾಮಗಳಿರುತ್ತಿದ್ದವೆಂದು ಹಿಂದೆ ಹೇಳಿಯೇ ಇದೆ. ಕರಣಿಕ ಮತ್ತು ಪಟಲ ಅಂದರೆ ಕುಲಕರ್ಣಿ ಮತ್ತು ಗೌಡ ಇವರಿಬ್ಬರು ಗ್ರಾಮದ ಅಧಿಕಾರಿಗಳು. ಆಷಾಢ ಪೌರ್ಣಿಮೆಗೆ ಮುಲಕಿ ವರ್ಷವು ಮುಗಿಯುತ್ತಿತ್ತು. ಅಗ ಗೌಡ ಕುಲಕರ್ಣಿಯರು ತಮ್ಮ ಲೆಕ್ಕಗಳನ್ನು ತೆಗೆದುಕೊಂಡು ಜಿಲ್ಹಾಸ್ಥಳಕ್ಕೆ ಹೋಗುತ್ತಿದ್ದರು. ಪ್ರತಿಯೊಂದು ಗ್ರಾಮಕ್ಕೂ ಜನರಿಂದ ಆರಿಸಲ್ಪಟ್ಟ ಗ್ರಾಮಾಧಿಪತಿಯೆಂಬವನೊಬ್ಬನು ಇರುತ್ತಿದ್ದನು. ಆತನಿಗೆ ವೇದದಲ್ಲಿ ಗ್ರಾಮಣಿಯೆಂದು ಹೆಸರು. ಪ್ರಾಚೀನ ಕಾಲದಲ್ಲಿ ಮಧ್ಯವರ್ತಿ ಸರಕಾರವು ಗ್ರಾಮದ ಒಳವ್ಯವಸ್ಥೆಯಲ್ಲಿ ಕೈಹಾಕುತ್ತಿರಲಿಲ್ಲ. ಪ್ರತಿಯೊಂದು ಗ್ರಾಮವು ಒಂದು ಸ್ವತಂತ್ರವಾದ ರಾಜಕೀಯ ಅಂಗವಾಗಿತ್ತು. ಗ್ರಾಮದ ಮುಖ್ಯಾಧಿಕಾರಿಯಾದ ಗ್ರಾಮಣಿಯೂ ಆತನ ಕೈಕೆಳಗಿನವರೂ ಗ್ರಾಮಸಭೆಯಿಂದ ನೇಮಿಸಲ್ಪಡುತ್ತಿದ್ದರು. ಅವರು ಗ್ರಾಮಸಭೆಗೂ ಗ್ರಾಮದವರಿಗೂ ಹೊಣೆಗಾರರು. ಈ ಅಧಿಕಾರಿಗಳು ವಂಶಪರಂಪರಾಗತರೋ ಹೇಗೆ ಎಂಬುದನ್ನು ಹೇಳುವುದು

ಕಠಿಣ. ಆದರೆ, ಭಾಷಾಶಾಸ್ತ್ರದ ಅಭ್ಯಾಸದ ಮೇಲಿಂದ ವೈದಿಕ ಕಾಲದಲ್ಲಿ ಅವರು ವಂಶಪರಂಪರಾಗತ ಅಧಿಕಾರಿಗಳಿದ್ದಿಲ್ಲವೆಂದೂ ಅವರು ಕೆಲ ಹೊಂದು ಅವಧಿಯವರೆಗೆ ಮಾತ್ರವೇ ನೇಮಿಸಲ್ಪಡುತ್ತಿದ್ದರೆಂದೂ ಹೇಳ ಬಹುದು. ಬರಬರುತ್ತ ಅವರು ಮಧ್ಯವರ್ತಿ ಸರಕಾರದ ಅಧಿಕಾರಕ್ಕೆ ಒಳಪಟ್ಟವರಾದರು. ಒಟ್ಟಿಗೆ, ಗ್ರಾಮಣಿಯು ಕೆಲವು ಕಾಲದಲ್ಲಿ ಆರಿಸಲ್ಪಟ್ಟ ಅಧಿಕಾರಿಯಾಗಿರಬೇಕು. ಕೆಲವು ಕಾಲದಲ್ಲಿ ನೇಮಿಸ ಲ್ಪಟ್ಟ ಅಧಿಕಾರಿಯಾಗಿರಬೇಕು. ಮತ್ತೆ, ಕೆಲವು ಕಾಲದಲ್ಲಿ ವಂಶ ಪರಂಪರಾಗತ ಅಧಿಕಾರಿಯಾಗಿರಬೇಕು. ಮನುಸ್ಮೃತಿಯ ಪ್ರಕಾರ ಗ್ರಾಮಣಿಗಳೆಲ್ಲರೂ ಸರಕಾರದ ಅಧಿಕಾರಿಗಳು. ಇವರ ತರಗತಿಗಳು ಹೀಗೆ ಇದ್ದವು. ಒಂದು ಗ್ರಾಮಕ್ಕೆ ಒಬ್ಬ ಅಧಿಪತಿ; ೧೦ ಗ್ರಾಮಗಳಿ ಗೊಬ್ಬ ಅಧಿಪತಿ; ೨೦ ಗ್ರಾಮಗಳಿಗೊಬ್ಬ ಅಧಿಪತಿ; ಆ ಬಳಿಕ ೧೦೦ ಗ್ರಾಮಗಳಿಗೊಬ್ಬನು; ಆ ಬಳಿಕ ೧೦೦೦ ಗ್ರಾಮಗಳಿಗೊಬ್ಬನು. ೧೦೦೦ಗ್ರಾಮಗಳ ಅಧಿಪತಿಗೆ ದೇಶಾಧ್ಯಕ್ಷನೆಂದೂ ಹೆಸರಿತ್ತು. ಚಂದ್ರಗುಪ್ತನ ಕಾಲದಿಂದ, ಮಧ್ಯವರ್ತಿ ಸರಕಾರದ ಅಧಿಕಾರವು ಹೆಚ್ಚುತ್ತ ನಡೆಯಿತು. ಗ್ರಾಮದ ಅಧಿಕಾರಿಗೆ ಗ್ರಾಮಿಕ, ಗ್ರಾಮಾ ಧಿಪ ಅಥವಾ ಗ್ರಾಮಕೂಟ ಎಂದೂ ಹೆಸರುಗಳಿದ್ದವು. ಆತನ ಕರ್ತ ವ್ಯಗಳು ಯಾವುವೆಂದರೆ– (೧) ಗ್ರಾಮದ ಸೀಮೆಯನ್ನು ಗೊತ್ತುಪಡಿ ಸುವುದು. ಮತ್ತು ಭೂಮಿಗಳ ಅಳತೆ ಮಾಡಿ ಅದರ ರಜಿಸ್ಟರ ಇಡು ವುದು. (೨) ಭೂಮಿಗಳಲ್ಲಿ ಪಡ, ಸಾಗು, ಹಕ್ಕಲ, ನೀರಾವರಿ ಮುಂತಾದ ಭಾಗಗಳನ್ನು ಗೊತ್ತು ಪಡಿಸುವುದು ಮತ್ತು ಗ್ರಾಮದೊ ಳಗಿನ ಮನೆಗಳು, ಸಭಾಗೃಹಗಳು, ದೇವಾಲಯಗಳು, ಸ್ಮಶಾನ ಭೂಮಿ, ಮುಂತಾದವುಗಳನ್ನು ಗೊತ್ತುಪಡಿಸಿ ಅವುಗಳ ರಜಿಸ್ಟರ ಇಡುವುದು. (೩) ಸಾರ್ವಜನಿಕ ನಿಧಿಯೊಳಗಿಂದ, ಕೆರೆಬಾವಿ, ಗುಡಿ ಮುಂತಾದವುಗಳನ್ನು ಕಟ್ಟಿಸುವ ವ್ಯವಸ್ಥೆ ಮಾಡುವುದು. (೪) ಜನನ ಮರಣ, ದನಕರುಗಳ ಗಣತಿಯ ಲೆಕ್ಕವನ್ನಿಡುವುದು. ಗ್ರಾಮದಲ್ಲಿ ಗ್ರಾಮವೃದ್ಧರದೊಂದು ಮಂಡಳವಿದ್ದು ಅವರು ಅನಾಥರ ಮತ್ತು ಅಲ್ಪ ವಯಿಗಳ ಆಸ್ತಿಯ ವ್ಯವಸ್ಥೆಯನ್ನು ನೋಡುತ್ತಿದ್ದರು. ಜನರ

ಉದ್ಯೋಗಗಳ ಪ್ರಕಾರ ವರ್ಗಗಳು ಮಾಡಲ್ಪಡುತ್ತಿದ್ದವು. ಮತ್ತು ಮುಖ್ಯ ಅಧಿಕಾರಿಗಳಾದ ಸಮಾಹರ್ತ ಮತ್ತು ಸ್ಥಾನಿಕ ಇವರ ಮೇಲ್ವಿಚಾರಣೆಯ ಕೆಳಗೆ ಜನಗಣತಿಯ ಖಾತೆಯೊಂದಿತ್ತು. ಒಟ್ಟಿಗೆ, ಗ್ರಾಮ ಸಭೆಯ ಅಧಿಕಾರವು ದೊಡ್ಡದಿತ್ತು.

ಗ್ರಾಮ ಸಭೆಯಲ್ಲಿ ಜನರಿಂದ ಆರಿಸಲ್ಪಟ್ಟ ಗ್ರಾಮ-ವೃದ್ಧರಿರುತ್ತಿದ್ದರು. ಅವರ ಸಂಖ್ಯೆ ಇಂತಿಷ್ಟೆ ಎಂದು ನಿರ್ಧಾರವಿದ್ದಿಲ್ಲ. ಆಯಾ ಕೆಲಸದ ಮಹತ್ವದಂತೆ ಅವರ ಸಂಖ್ಯೆಯಲ್ಲಿ ಹೆಚ್ಚು ಕಡಿಮೆಯಾಗುತ್ತಿತ್ತು. ಇವರು ಜನತೆಯ ನಿಜವಾದ ಪ್ರತಿನಿಧಿಗಳು. ಇವರ ನಿರ್ಣಯವೆಂದರೆ ಇಡೀ ಗ್ರಾಮದ ನಿರ್ಣಯವೆಂದು ತಿಳಿಯಲ್ಪಡುತ್ತಿತ್ತು. ಇವರು ಗ್ರಾಮದ ಯಾವತ್ತು ಬಗೆಯ ಸ್ಥಾನಿಕ ರಾಜ್ಯವ್ಯವಸ್ಥೆಯನ್ನು ನಡಿಸುತ್ತಿದ್ದರು. ಸಣ್ಣಪುಟ್ಟ ಮುಲಕಿ ಮತ್ತು ಫೌಜದಾರಿ ಖಟ್ಲೆಗಳನ್ನು ತೀರಿಸುತ್ತಿದ್ದರು. ಇವರು ತಮ್ಮ ನಿರ್ಣಯವನ್ನು ಬಹುಮತದಿಂದ ಕೊಡುತ್ತಿದ್ದರು. ಗ್ರಾಮಣಿಯು ಈ ಸಭೆಯ ಅಧ್ಯಕ್ಷನು. ಆತನು ಸ್ಥಾನಿಕ ಸ್ವರಾಜ್ಯಕ್ಕೂ ಮಧ್ಯವರ್ತಿ ಸರಕಾರಕ್ಕೂ ನಡುವಿನ ಕೊಂಡಿಯು. ಮುಂದೆ ಆತನು ವಂಶಪರಂಪರಾಗತ ಅಧಿಕಾರಿಯಾದನು; ಮತ್ತು ಗ್ರಾಮದ ಉತ್ಪನ್ನದೊಳಗಿಂದ ಆತನಿಗೆ ಸಂಬಳ ದೊರೆಯಹತ್ತಿತು. ಆತನ ಕೈಕೆಳಗೆ ಸಾಹಸಾಧಿಕಾರಿ (Police Officer) ಅಂದರೆ ತಳವಾರ (೨) ಕುಲಕರಣಿ (೩) ಕಾರಕೂನ (೪) ಸುಂಕದ ಅಧಿಕಾರಿ (೫) ಪ್ರತೀಹಾರ– ಕೊತವಾಲ (ಗ್ರಾಮರಕ್ಷಕ).

ಈ ಗ್ರಾಮಣಿಯ ಮೇಲೆ 'ಗೋಪ'ನೆಂಬ ಮಧ್ಯವರ್ತಿ ಸರಕಾರದ ಅಧಿಕಾರಿ ಇರುತ್ತಿದ್ದನು. ಆತನ ಮೇಲೆ ಸ್ಥಾನಿಕನು, ಆತನ ಮೇಲೆ ಸಮಾಹರ್ತನು. ಗೋಪನು ೧೦ ಗ್ರಾಮದ ಅಧಿಕಾರಿ. ಮಂತ್ರಿಗಳಲ್ಲೊಬ್ಬನು ಈ ಖಾತೆಯ ಮುಖ್ಯ ಮೇಲ್ವಿಚಾರಕನು. ಸ್ಥಾನಿಕ ಸ್ವರಾಜ್ಯ, ಔದ್ಯೋಗಿಕ ಸ್ವಾತಂತ್ರ್ಯ ಮತ್ತು ಸಮೂಹ ಸ್ವಾತಂತ್ರ್ಯ ಇವೆಲ್ಲವು ಆಗಿನ ಕಾಲದ ಗ್ರಾಮಸಂಸ್ಥೆಯ ಮುಖ್ಯ ಲಕ್ಷಣಗಳು. ದೇಶದಲ್ಲಿ ಆಗಿನ ಕಾಲಕ್ಕೆ, ಜಾತಿ ವಿಷಯಕ ಪಂಚಾಯತಿ, ಗ್ರಾಮ ಪಂಚಾಯತಿ, ವರ್ತಕರ ಶ್ರೇಣಿಗಳು; ಧರ್ಮಾಧಿಕಾರಿಗಳ ಸಮವಾಯಗಳು

ವಿದ್ಯಾಪೀಠಗಳ ಸಂಘಟಿತ ದೊಡ್ಡ ಸಂಸ್ಥೆಗಳು ಪ್ರಚಲಿತವಾಗಿದ್ದವು. ಸಾರ್ವಜನಿಕ ಆರಿಸುವಿಕೆ, ಸರ್ವರಿಗೂ ಮತಕೊಡುವ ಅಧಿಕಾರ, ಪ್ರತಿನಿಧಿ ತತ್ತ್ವಕ್ಕನುಸರಿಸಿದ ಲೋಕಸತ್ತೆ, ಬಹುಮತ ಪ್ರಾಬಲ್ಯ, ವ್ಯಕ್ತಿ ಮತ್ತು ಸಮಾಜ ಇವುಗಳ ಹಕ್ಕುಗಳ ಯೋಗ್ಯ ರಕ್ಷಣ, ಕೆಲವು ವಿಶಿಷ್ಟ ಪ್ರಶ್ನೆಗಳ ಸಂಬಂಧವಾಗಿ ಮತಗಳನ್ನು ಪ್ರತ್ಯಕ್ಷವಾಗಿ ತೆಗೆದುಕೊಳ್ಳುವ ಪದ್ಧತಿ, ಮತಸ್ವಾತಂತ್ರ್ಯ ಮತ್ತು ಗುಪ್ತ ಮತದಾನ ಇವೇ ಮುಂತಾದ ತತ್ವಗಳು ಹಿಂದಿನ ಕಾಲದಲ್ಲಿ ವಿಶೇಷ ರೀತಿಯಿಂದ ಪಾಲಿಸಲ್ಪಡುತ್ತಿದ್ದವು. ಹೆಂಗಸರಿಗೆ ಮಾತ್ರ ಆಗಿನ ಕಾಲದಲ್ಲಿ ಮತಕೊಡುವ ಅಧಿಕಾರವಿದ್ದಿಲ್ಲ. ಹೆಂಗಸೂ ಒಂದು ರಾಜಕೀಯ ಘಟಕಾವಯವವೆಂದು ಮನುಸ್ಮೃತಿಯು ಹೇಳುವುದಿಲ್ಲ.

---

## ೧೪ನೆಯ ಪ್ರಕರಣ

## ನ್ಯಾಯಖಾತೆ.

ದೇಶದಲ್ಲಿ ಎರಡು ಪ್ರಕಾರದ ನ್ಯಾಯ ಸಭೆಗಳಿದ್ದವು. (೧) ಧರ್ಮಸ್ಥೀಯ (೨) ಕಂಟಕ ಶೋಧನ. ಆವೆರಡರ ಅಧಿಕಾರಮರ್ಯಾದೆ ಬೇರೆ ಬೇರೆ. ಧರ್ಮಸ್ಥೀಯ ಕೋರ್ಟಿನಲ್ಲಿ ಮೂವರು ನ್ಯಾಯಾಧೀಶರು ಇರುತ್ತಿದ್ದರು. ಮೂವರು ಶಾಸ್ತ್ರಪಂಡಿತರು ಅಥವಾ ಮೂವರು ಅಮಾತ್ಯರು ಕೂಡಿ ಈ ಸಭೆಯ ಕೆಲಸ ನಡಿಸುತ್ತಿದ್ದರು. ಕಂಟಕ ಶೋಧನ ಕೋರ್ಟುಗಳಲ್ಲಿ ಮೂವರು ಅಮಾತ್ಯರು ಅಥವಾ ಮೂವರು ಪ್ರದೇಷ್ಟಾರರು ಇರುತ್ತಿದ್ದರು.

**ಈ ಕೋರ್ಟುಗಳ ಅಧಿಕಾರ ಮರ್ಯಾದೆ:-** ವ್ಯಕ್ತಿ ವ್ಯಕ್ತಿಗಳೊಳಗಿನ ತಂಟೆಗಳನ್ನು ತೀರಿಸುವುದು ಈ ಧರ್ಮಸ್ಥೀಯ ಕೋರ್ಟುಗಳ ಅಧಿಕಾರವು. ಇವರಲ್ಲಿ, ಸಣ್ಣಪುಟ್ಟ ದಂಡಗಳ ಶಿಕ್ಷೆಯು ವಿಧಿಸಲ್ಪಡುತ್ತಿತ್ತು. ಕಂಟಕ ಶೋಧಕ ಕೋರ್ಟುಗಳಲ್ಲಿ ಸಾರ್ವಜನಿಕ ಅಥವಾ ಸರಕಾರದ ವಿರುದ್ಧ, ಅರಸರ ವಿರುದ್ಧ ಅಥವಾ ಸಂಸ್ಥೆ

ಗಳ ವಿರುದ್ಧ ತಂಟೆಗಳೂ, ಬೆಂಕಿ ಹಚ್ಚುವುದು ಮುಂತಾದ ಭಯಂಕರ ಅಪರಾಧಗಳೂ ಚವಕಸಿ ಮಾಡಲ್ಪಡುತ್ತಿದ್ದವು. ಸಣ್ಣಪುಟ್ಟ ದಂಡಗಳ ಮೊದಲ್ಗೊಂಡು ದೊಡ್ಡ ದೊಡ್ಡ ಶಿಕ್ಷೆಗಳನ್ನು ಮಾಡುವ ಅಧಿಕಾರವು ಈ ಕೋರ್ಟುಗಳಿಗೆ ಇತ್ತು. ಈ ಕೋರ್ಟಿಗೆ ಮರಣ ದಂಡನೆಯನ್ನು ಕೊಡುವ ಅಧಿಕಾರವೂ ಇತ್ತು.

**ಈ ಕೋರ್ಟುಗಳು ನಡಿಸತಕ್ಕ ಖಟ್ಲೆಗಳ ವಿವರ.**

**ಧರ್ಮಸ್ಥೀಯ:**- (೧) ವ್ಯವಹಾರದ (Contracts) ತಂಟೆಗಳು(೨) ಯಜಮಾನ ಮತ್ತು ಸೇವಕರೊಳಗಿನ ತಂಟೆಗಳು (೩) ಗುಲಾಮಜನರ ಸಂಬಂಧದ ತಂಟೆಗಳು (೪) ಸಾಲಗಳು ಮತ್ತು ಉಪನಿಧಿಗಳು (Deposits) (೫) ದರೋಡೆ ಮತ್ತು ಹಿಂಸೆ (೬) ದಂಡಪಾರುಷ್ಯ ಅಂದರೆ ಹೊಡೆದಾಟ (೭) ವಾಕ್‌ಪಾರುಷ್ಯ ಅಂದರೆ ಮಾನಭಂಗ (೮) ದ್ಯೂತ (೯) ಒಡೆತನದ ಹಕ್ಕುಗಳು (೧೦) ವಿವಾಹ (೧೧) ದಾಯವಿಭಾಗ (Inheritance and Succession) (೧೨) ಹೊಲ, ರಸ್ತೆ, ಮುಂತಾದ ಸಂಬಂಧದ ತಂಟೆಗಳು.

**ಕಂಟಕ ಶೋಧನ:**- (೧) ಕಾರುಕ ರಕ್ಷಣ ಅಂದರೆ ಉದ್ಯೋಗದವರ ರಕ್ಷಣ (೨) ವರ್ತಕರ ರಕ್ಷಣ (೩) ಉಪನಿಪಾತ ಅಂದರೆ ದ್ರವ್ಯಹಾನಿ ಮುಂತಾದ್ದು (೪) ಗೂಢಜೀವಿ- ಕಳವು ತುಡುಗು ಮಾಡುವ ಕೆಟ್ಟ ಜನರ ಅಪರಾಧ (೫) ಗುಪ್ತಚಾರರಿಂದ ಗುನ್ಹೆಗಾರರ ತಪಾಸು (೬) ಅಧಿಕಾರಿಗಳು ಮಾಡುವ ಅಪರಾಧ (೭) ಕನ್ಯಾಪ್ರಕರ್ಮ ಅಂದರೆ Improper Social Intercourse. (೮) ಮತ್ತು ಮಿಕ್ಕ ಚಿಲ್ಲರ ಅಪರಾಧಗಳು.

ಇವುಗಳ ಮೇಲೆ ಪುನರ್ನ್ಯಾಯ (Appeal) ಕೋರ್ಟುಗಳಿದ್ದವು. ಎಲ್ಲಕ್ಕೂ ವರಿಷ್ಠ ಕೋರ್ಟು ಎಂದರೆ ಅರಸ, ಆತನ ಮಂತ್ರಿ, ಮತ್ತು ವಿದ್ವಾಂಸ ಬ್ರಾಹ್ಮಣರು ಇವರಿಂದ ಕೂಡಿದ ಕೋರ್ಟು. ಅದಕ್ಕೆ ರಾಜ ಪ್ರಣಿಧಿಯೆಂದು ಹೆಸರು.

ಬೃಹಸ್ಪತಿ, ಗೌತಮ, ಶುಕ್ರ ಮುಂತಾದ ಶಾಸ್ತ್ರಕಾರರ ಕಾಲದಲ್ಲಿ ನಾಲ್ಕು ಬಗೆಯ ನ್ಯಾಯ ಸಭೆಗಳಿರುತ್ತಿದ್ದವು. ಅವು ಯಾವವೆಂದರೆ-

(೧) ಸ್ಥಾನೀಯ- ಗ್ರಾಮದಲ್ಲಿಯೂ ಪಟ್ಟಣದಲ್ಲಿಯೂ ಇದ್ದದು

(೨) ಪ್ರಚಾರಕ (Moving)

(೩) ರಾಜಮುದ್ರೆಯನ್ನು ಒತ್ತುವ ಅಧಿಕಾರವುಳ್ಳವುಗಳು.

(೪) ರಾಜನ ಸಮಕ್ಷ ಮತ್ತು ಆತನ ಅನುರೋಧದಿಂದ ನಡೆನವುಗಳು. ಇವೆಲ್ಲವೂ ಸರಕಾರದ ನ್ಯಾಯಸಭೆಗಳಾದವು. ಇವಲ್ಲದೆ ಆಯಾ ಕುಲ, ಶ್ರೇಣಿ, ಗಣ ಅಥವಾ ಸಂಘಗಳ ನ್ಯಾಯಸಭೆಗಳು ಬೇರೆ. ಆದರೆ ಇವುಗಳಿಗೆ ತಮ್ಮ ನಿರ್ಣಯುಗಳನ್ನು ಜ್ಯಾರಿಯಲ್ಲಿ ತರುವುದಕ್ಕೆ ಸರಕಾರದ ನ್ಯಾಯಕೋರ್ಟುಗಳ ಸಹಾಯುವನ್ನು ಪಡೆಯ ಬೇಕಾಗುತ್ತಿತ್ತು.

ಪ್ರಾಡ್ವಿವಾಕನೇ ಮುಖ್ಯ ನ್ಯಾಯಾಧೀಶನು. ಆತನು ಅರಸನ ಮತ್ತು ೩-೪ ಧಾರ್ಮಿಕರ ಸಹಾಯದಿಂದ ಕೊನೆಯ ನಿರ್ಣಯ ಕೊಡುತ್ತಿದ್ದನು.

ಮುಖ್ಯ ನ್ಯಾಯಕೋರ್ಟಿನ ಕೆಳಕೋರ್ಟುಗಳು ಯಾವವೆಂದರೆ:-

(೧) ಜನಪದ ಸಂಧಿ- ಎರಡು ದೇಶಗಳ ನಡುವಿನ ಒಂದು ಪಟ್ಟಣದಲ್ಲಿದ್ದದ್ದು.

(೨) ಸಂಗ್ರಹಣ- ಕೆಲವು ಗ್ರಾಮಗಳ ಗುಂಪುಗಳಿಗೆ ಇದ್ದದ್ದು.

(೩) ದ್ರೋಣಮುಖ- ೪೦೦ ಹಳ್ಳಿಗಳ ಮೇಲಿನದು. ಇದರ ಮುಖ್ಯ ಕಚೇರಿಯು ಪಟ್ಟಣದಲ್ಲಿ.

(೪) ಸ್ಥಾನೀಯ- ೮೦೦ ಗ್ರಾಮುಗಳ ಮೇಲಿನದು.

ಇವುಗಳ ಘಟನೆಯೂ ರಾಜಪ್ರಣಿಧಿಯಂತೆಯೇ ಇತ್ತು. ಮುಲಕಿ ಮತ್ತು ಫೌಜದಾರಿ ಹೀಗೆ ಬೇರೆ ಬೇರೆ ಕೋರ್ಟುಗಳಿರಲಿಲ್ಲ.

ನ್ಯಾಯ ಕೋರ್ಟುಗಳು ನಿತ್ಯದಲ್ಲಿ ನಡೆಯುತ್ತಿದ್ದವು. ಅವು ದೇವಾಲಯಗಳಷ್ಟು ಪವಿತ್ರವಾದವುಗಳೆಂದು ತಿಳಿಯಲ್ಪಡುತ್ತಿದ್ದವು. ಅವು ಬಹಿರಂಗವಾಗಿ ಖಟ್ಲೆ ನಡಿಸುತ್ತಿದ್ದವು; ಗುಪ್ತ ರೀತಿಯಿಂದ ಯಾವ ಖಟ್ಲೆಯೂ ನಡೆಯುತ್ತಿರಲಿಲ್ಲ.

ನ್ಯಾಯವಿಚಾರಣೆಯು ಗೊತ್ತಾದ ನಿಯಮಗಳ ಪ್ರಕಾರ ಸಾಗು ತ್ತಿತ್ತು. ಅರಸನಿಗೂ ಕೂಡ ಆ ನಿಯಮಗಳ ವಿರುದ್ಧ ಹೋಗುವ ಅಧಿಕಾರವಿದ್ದಿಲ್ಲ. ಮಹತ್ವದ ಅಪರಾಧಗಳ ಖಟ್ಲೆಗಳನ್ನು ಸರಕಾರದ ವರೇ ನಡಿಸುತ್ತಿದ್ದರು. ನ್ಯಾಯಾಧೀಶರು ಸರಿಯಾಗಿ ಖಟ್ಲೆಗಳನ್ನು ನಡಿಸುತ್ತಾರೋ ಇಲ್ಲವೋ ಎಂಬುದನ್ನು ಪರೀಕ್ಷಿಸುವುದಕ್ಕೋಸ್ಕರ ಗುಪ್ತಚಾರರು ಇರುತ್ತಿದ್ದರು. ಹಾಗೆ ನಡಿಸದಿದ್ದ ನ್ಯಾಯಾಧೀಶ ರನ್ನು ಅರಸನು ಶಿಕ್ಷಿಸುತ್ತಿದ್ದನು.

**ಜ್ಯೂರಿ ಪದ್ಧತಿ:–** ನ್ಯಾಯಕೋರ್ಟುಗಳಲ್ಲಿ ನ್ಯಾಯಾಧೀಶರಿಗೆ ಸಹಾಯ ಮಾಡುವುದಕ್ಕೆ ಪಂಚರು ಇರುತ್ತಿದ್ದರು. ಅವರೂ ನ್ಯಾಯ ಸಭೆಯ ಭಾಗಗಳೇ. ಅಂದರೆ ಅವರಿಗೆ ಈಗಿನ ಭಾಷೆಯಲ್ಲಿ ಜ್ಯೂರಿಗ ಳೆಂದು ಹೇಳಬಹುದು. ಮತಗಣನೆಯ ಸಲುವಾಗಿ ಅವರ ಸಂಖ್ಯೆ ಯಾವಾಗಲೂ ವಿಷಮವಾಗಿರುತ್ತಿತ್ತು.

**ನ್ಯಾಯಕ್ರಮ:–** ಪ್ರತಿಯೊಂದು ಖಟ್ಲೆಯಲ್ಲಿ ನಾಲ್ಕು ವಿಭಾಗ ಗಳಿದ್ದವು.

(೧) ಪೂರ್ವಪಕ್ಷ- ಫಿರ್ಯಾದಿ (ಅರ್ಥೀ Complainant or plaintiff)

(೨) ಪ್ರತಿಪಕ್ಷ– (ಪ್ರತ್ಯರ್ಥಿಯ ಉತ್ತರ– Defendant)

(೩) ಕ್ರಿಯಾ– ಪುರಾವೆ ಮತ್ತು ಚೌಕಸಿ

(೪) ನಿರ್ಣಯ.

ಅಪೀಲುಕೋರ್ಟುಗಳಲ್ಲಿಯೂ ಕೆಳಕೋರ್ಟುಗಳಂತೆಯೇ ಪುನಃ ಚವಕಶಿ ನಡೆಯುತ್ತಿತ್ತು.

---

## ೧೫ನೆಯ ಪ್ರಕರಣ

# ಯುದ್ಧ ಅಥವಾ ಸೈನ್ಯವಿಭಾಗ.

ಪ್ರಾಚೀನ ಕಾಲದಲ್ಲಿ, ಅರಸರಿಗೆ ಯುದ್ಧ ಮಾಡುವ ಪ್ರಸಂಗಗಳು ಮೇಲಿಂದ ಮೇಲೆ ಬರುತ್ತಿದ್ದುದರಿಂದ ಅವರಿಗೆ ಯಾವಾಗಲೂ ಉತ್ತಮ ವಾದ ಸೈನ್ಯವನ್ನಿಡಬೇಕಾಗುತ್ತಿತ್ತು.

ಸೈನ್ಯದಲ್ಲಿ ನಾಲ್ಕು ವಿಭಾಗಗಳಿದ್ದವು. (೧) ಪದಾತಿ (೨) ರಥ (೩) ಕುದುರೆ (೪) ಆನೆ. ಆಯಾ ಕಾಲ ಮತ್ತು ಪ್ರಸಂಗಗಳಿಗೆ ತಕ್ಕಂತೆ ಇವುಗಳ ಬೇರೆ ಬೇರೆ ವ್ಯೂಹಗಳು ರಚಿಸಲ್ಪಡುತ್ತಿದ್ದವು. ಶಾಂತಿಪರ್ವ (ಅ. ೧೬೦)ದಲ್ಲಿ, ರಥಗಳೂ ಕುದುರೆಗಳೂ ವಿಶೇಷವಾಗಿದ್ದ ಸೈನ್ಯದ ಉಪಯೋಗವು ಹವೆಯು ಚೆನ್ನಾಗಿದ್ದಾಗಿನ ಕಾಲದಲ್ಲಿ ಉತ್ತಮವಾಗಿ ಆಗುತ್ತದೆಂದು ಹೇಳಿದೆ. ಮಳೆಗಾಲದಲ್ಲಿ ಕಾಲುದಳದ ಉಪಯೋಗವು ಹೆಚ್ಚು. ಶತ್ರುಗಳ ಸೈನ್ಯವನ್ನು ವಿಧ್ವಂಸ ಮಾಡುವುದಕ್ಕೆ ಆನೆಗಳ ಉಪಯೋಗ.

**ಯುದ್ಧ ಸಾಮಗ್ರಿ:**– ಯುದ್ಧಕ್ಕೋಸ್ಕರ ಉಪಯೋಗವಾಗುವ ಅನೇಕ ಬಗೆಯ ರಥಗಳಿದ್ದವು. ಶತ್ರುಗಳ ಹೊಡೆತಗಳನ್ನು ತಪ್ಪಿಸಿಕೊಳ್ಳುವುದಕ್ಕೆ ರಥಗಳು ಒಳ್ಳೇ ಉಪಯೋಗವಾದವುಗಳು. ಅದೇ ಮೇರೆಗೆ ಶತ್ರುಗಳ ಆಯುಕಟ್ಟಿನ ಸ್ಥಳಗಳನ್ನಾಕ್ರಮಿಸಿಕೊಂಡು ಅವರ ಸೈನ್ಯವನ್ನು ಚದರಿಸಲಿಕ್ಕೆ ರಥಗಳ ಉಪಯೋಗವಾಗುತ್ತಿತ್ತು. ಕುದುರೆಸ್ವಾರರು ಸೈನ್ಯದ ಮಹತ್ವದ ಅಂಗ. ತೀವ್ರದಲ್ಲಿ ಜರುಗಿಸಬೇಕಾದ ಕೆಲಸಕ್ಕೆ ಈ ಸ್ವಾರರ ಉಪಯೋಗ ಹೆಚ್ಚು. ಶತ್ರುಗಳು ಆಕ್ರಮಿಸಿದ ಪ್ರದೇಶಗಳನ್ನು ಹಸ್ತಗತ ಮಾಡಿಕೊಳ್ಳುವುದಕ್ಕೂ ತಮ್ಮ ಕೋಶವನ್ನೂ ರಣಸಾಮಗ್ರಿಯನ್ನೂ ರಕ್ಷಿಸಿಕೊಳ್ಳುವುದಕ್ಕೂ ಶತ್ರುಗಳ ಧಾನ್ಯಕೋಶ ಮತ್ತು ರಣಸಾಹಿತ್ಯವನ್ನು ಕಡಿದು ಬಿಡುವುದಕ್ಕೂ ಓಡಿ ಹೋಗುವ ಸೈನ್ಯವನ್ನು ಬೆನ್ನಟ್ಟುವುದಕ್ಕೂ ಇವರ ಉಪಯೋಗವಾಗುತ್ತಿತ್ತು.

ಮಹಾಭಾರತದಲ್ಲಿ ಆಯುಧಗಳಲ್ಲಿ ಯಂತ್ರ ಮತ್ತು ಆಯುಧವೆಂದು ಎರಡು ವಿಭಾಗಗಳು ಮಾಡಲ್ಪಟ್ಟಿವೆ. ಕತ್ತಿ ಮತ್ತು ಢಾಲು ಇವು ಕಾಲುದಳದ ಮುಖ್ಯ ಆಯುಧಗಳು. ಇವಲ್ಲದೆ (೧) ಭಲ್ಲೆ (೨) ಪರಶು (೩) ಭಂಡಿಪಾಲ (೪) ತೋಮರ (೫) ಖುಷ್ಟಿ (೬) ಶುಕ್ಲ ಮುಂತಾದ ಆಯುಧಗಳಿರುತ್ತಿದ್ದವು. ಕವಚ ಅಂದರೆ ಚಿಲಕತ್ತುಗಳನ್ನು ರಥಿಗಳೂ ಗಜಾರೂಢರೂ ಉಪಯೋಗಿಸುತ್ತಿದ್ದರು. ಪದಾತಿಯಲ್ಲಿ ಅನೇಕ ವರ್ಗಗಳಿದ್ದವು. (೧) ಮೌಲ (Regulars) (೨)

ಭೃತ ಸಂಬಳದ ಸೈನ್ಯ (೩) ಶ್ರೇಣಿಯವರು ಪೂರೈಸಿದ್ದು (೪) ಶತ್ರುಗಳ ಪ್ರದೇಶದಲ್ಲಿ ಕೂಡಿ ಹಾಕಿದ್ದು. (೫) ಮಿತ್ರರಾಜ್ಯದಲ್ಲಿ ಕೂಡಿಸಿದ್ದು. (೬) ಅರಣ್ಯದಲ್ಲಿರುವ ಜನರೊಳಗಿಂದ ಆರಿಸಿದ್ದು. ಇದಲ್ಲದೆ ಬೇರೆ ಬೇರೆ ಗ್ರಂಥಗಳಲ್ಲಿ ಮತ್ತೆ ಬೇರೆ ಪ್ರಕಾರಗಳು ಹೇಳಲ್ಪಟ್ಟಿವೆ.

ಸೈನ್ಯದಲ್ಲಿಯ ಗುಂಪುಗಳ ವಿವರ:– [೧] ಪತ್ತಿ (Section) [೨] ಸೇನಾಮುಖ (Platoon) [೩] ಗುಲ್ಮ (Brigade) [೪] ಗಣ (Company) [೫] ವಾಹಿನಿ (Battalion) [೬] ಪೃತ್ನ [Regiment) [೭] ಚಮೂ (Division) [೮] ಅನೀಕಿನೀ (Army) [೯] ಅಕ್ಷೌಹಿಣಿ (Corps) ಹೀಗೆ ಸ್ಥೂಲತಃ ವಿಭಾಗಗಳಿದ್ದವು.

ಚಾಣಕ್ಯನು ಅರ್ಥಶಾಸ್ತ್ರ [ಪು. ೨ ಅ. ೨೮] ದಲ್ಲಿ ಯಂತ್ರಗಳ ಎರಡು ಪ್ರಕಾರಗಳನ್ನು ಹೇಳಿರುವನು [೧] ಸ್ಥಿತಯಂತ್ರ [೨] ಚಲ ಯಂತ್ರ. ಅಗ್ನಿ ಪುರಾಣ [ಅ. ೧೪೮. ೭] ದಲ್ಲಿ ಶಸ್ತ್ರಾಸ್ತ್ರಗಳ ಭೇದಗಳು ಹೀಗೆ ಹೇಳಲ್ಪಟ್ಟಿವೆ. [೧] ಯಂತ್ರಮುಕ್ತ ಅಂದರೆ ಯಂತ್ರದ್ವಾರ ದಿಂದ ಬಿಡತಕ್ಕ ಶಸ್ತ್ರಾಸ್ತ್ರಗಳು [೨] ಪಾಣಿಮುಕ್ತ ಅಂದರೆ ಕೈಯಿಂದ ಬಿಡತಕ್ಕವುಗಳು [೩] ಮುಕ್ತ ಸಂಧೃತ ಅಂದರೆ ಬಿಟ್ಟು ಪುನಃ ಕೈಯಲ್ಲಿ ತೆಗೆದುಕೊಳ್ಳತಕ್ಕವುಗಳು. [೪] ಅಮುಕ್ತ- ಒಂದೇ ಸ್ಥಳದಲ್ಲಿ ಬದ್ಧ ಮಾಡಲ್ಪಟ್ಟವುಗಳು [೫] ಬಾಹುಯುದ್ಧ- ಯುದ್ಧ ಕಾಲದಲ್ಲಿ ಕೈಗಳಿಗೆ ಕಟ್ಟಿಕೊಳ್ಳತಕ್ಕವುಗಳು.

ನೀತಿಪ್ರಕಾಶಿಕಾ ಎಂಬ ಗ್ರಂಥದಲ್ಲಿ ಈ ಮುಕ್ತ, ಅಮುಕ್ತ ಮತ್ತು ಯಂತ್ರಮುಕ್ತ ಶಸ್ತ್ರಗಳ ದೊಡ್ಡದೊಂದು ಪಟ್ಟಿಯೇ ಕೊಡಲ್ಪಟ್ಟದೆ.

ಯುದ್ಧ ಕಾಲಕ್ಕೆ ಸೈನ್ಯವನ್ನು ಸಾಧಾರಣವಾಗಿ ಹೇಗೆ ನಿಲ್ಲಿಸಬೇಕೆಂಬುದನ್ನು ಶಾಂತಿಪರ್ವ [ಅ. ೯೯] ದಲ್ಲಿ ಹೇಳಿದೆ. ಹಿಂದಿನ ಕಾಲದಲ್ಲಿ, ಕಾಶಿಯ ರಾಜನಾದ ಪ್ರತರ್ದನನಿಗೂ ಮಿಥಿಲಾಧಿಪತಿಯಾದ ಜನಕರಾಜನಿಗೂ ಯುದ್ಧವಾದಾಗ ಜನಕನು ತನ್ನ ಸೈನ್ಯದ ಅಗ್ರಭಾಗದಲ್ಲಿ ಬುದ್ಧಿವಂತ ಕ್ಷತ್ರಿಯರನ್ನೂ ಗಜಗಳ ಮಧ್ಯಭಾಗದಲ್ಲಿ ರಥಗಳನ್ನೂ ರಥಗಳ ಹಿಂದೆ ಅಶ್ವದಳವನ್ನೂ ಅಶ್ವದಳದ ಮಧ್ಯ

ಭಾಗದಲ್ಲಿ ಕವಚಧರಿಸಿದ ಕಾಲುದಳವನ್ನೂ ನಿಲ್ಲಿಸಬೇಕೆಂದು ಹೇಳಿದ್ದನು. ಆದರೆ ಭಾರತಯುದ್ಧದಲ್ಲಿ ಸೈನ್ಯವನ್ನು ಹೀಗೆ ನಿಲ್ಲಿಸಿದ ವರ್ಣನೆಯಿಲ್ಲವೆಂದು ಶ್ರೀ. ವೈದ್ಯ ಇವರು ಹೇಳುತ್ತಾರೆ. ಭಾರತ ಯುದ್ಧವು ಒಂದು ವಿಶೇಷ ಬಗೆಯ ಯುದ್ಧವು. ಆದರಲ್ಲಿ ನಿತ್ಯದಲ್ಲಿ ವ್ಯೂಹಗಳು ಬದಲಾಗುತ್ತಿದ್ದವು. ಚಾಣಕ್ಯನು ವ್ಯೂಹಗಳಲ್ಲಿ ನಾಲ್ಕು ವರ್ಗಗಳನ್ನು ಮಾಡಿರುವನು [೧] ದಂಡ (Transverse section) ಮಧ್ಯದಲ್ಲಿ ಸೈನ್ಯದ ವ್ಯೂಹವನ್ನು ರಚಿಸುವುದು. [೨] ಭೋಗ (ಸರ್ಪ)- ಸೈನ್ಯದ ಸಾಲುಗಳನ್ನು ಒಂದರ ಹಿಂದೆ ಒಂದು ನಿಲ್ಲಿಸುವುದು. [೩] ಮಂಡಲ- ಸೈನಿಕರ ಮುಖಗಳು ಎಲ್ಲ ದಿಕ್ಕುಗಳಿಗೂ ಆಗುವಂತೆ ಮಂಡಲಾಕಾರವಾಗಿ ನಿಲ್ಲುವುದು. [೪] ಅಸಹಂತ ಅಂದರೆ ಸೈನ್ಯದ ಭಾಗಗಳನ್ನು ಮಾಡಿ ಬೇರೆ ಬೇರೆ ಗುಂಪುಗಳಾಗಿ ನಿಲ್ಲಿಸುವುದು.

ಧನುಷ್ಯದಂತೆ ಆಕಾರ ಮಾಡಿ ನಿಲ್ಲಿಸಿದ ವ್ಯೂಹಕ್ಕೆ ಸಂಜಯ ವ್ಯೂಹವೆನ್ನುತ್ತಾರೆ. ಆದರ ತುದಿಯು ಸಂಕುಚಿತವಾಗಿ ಇದ್ದರೆ ಆದಕ್ಕೆ 'ವಿಜಯ'ವೆಂದು ಹೆಸರು. ಆದರ ಪಕ್ಕಗಳು ದಟ್ಟವಾಗಿದ್ದರೆ ಅದಕ್ಕೆ 'ಚಮೂಮುಖ'ವೆನ್ನುವರು. ಆದರ ವಿರುದ್ಧವಿದ್ದ ವ್ಯೂಹಕ್ಕೆ 'ಝುಷಾಸ್ಯ'ವೆಂದು ಹೆಸರು. ದಂಡವ್ಯೂಹದಲ್ಲಿ ಒಂದು ಭಾಗವು ಮಿಕ್ಕ ಸೈನ್ಯಕ್ಕಿಂತ ಎತ್ತರವಾದ ಸ್ಥಳದ ಮೇಲೆ ನಿಲ್ಲಿಸಲ್ಪಟ್ಟಿದ್ದರೆ ಆದಕ್ಕೆ 'ಸೂಚಿವ್ಯೂಹ'ವೆನ್ನುತ್ತಾರೆ. ಈ ವ್ಯೂಹದಲ್ಲಿ ಎರಡು ಸಾಲುಗಳು ಎತ್ತರದಲ್ಲಿ ನಿಂತಿದ್ದರೆ ಆದಕ್ಕೆ 'ವಲಯವ್ಯೂಹ'ವೆನ್ನುತ್ತಾರೆ. ನಾಲ್ಕು ಸಾಲುಗಳಿದ್ದರೆ 'ದುರ್ಜಯವ್ಯೂಹ'ವಾಯಿತು. ಇವೆಲ್ಲವು **ದಂಡವ್ಯೂಹದ** ಬೇರೆ ಬೇರೆ ಪ್ರಕಾರಗಳೆ.

ಭೋಗವ್ಯೂಹದಲ್ಲಿ ನಾಲ್ಕು ಒಳಭೇದಗಳು- [೧] ಸರ್ಪಸಾರೀ ಅಥವಾ ಗೋಮುತ್ರಿಕ [೨] ಶಕಟವ್ಯೂಹ [೩] ಮಕರವ್ಯೂಹ [೪] ವಾರಿಪತಂತಕ. ಮಂಡಳವ್ಯೂಹದಲ್ಲಿ ಎರಡು ಭೇದಗಳು [೧] ಸರ್ವತೋಮುಖ ಅಥವಾ ಸರ್ವತೋಭದ್ರ, [೨] ಅಷ್ಟಾನೀಕ. ಅಸಂಹತವ್ಯೂಹದಲ್ಲಿ, ಬೇರೆ ಬೇರೆ ಮಾಡಲ್ಪಟ್ಟ ಭಾಗಗಳ ಮೇಲಿಂದ ಬೇರೆ ಬೇರೆ ಹೆಸ

ರುಗಳಿರುತ್ತವೆ. [೧] ೫ ಬೇರೆ ಭಾಗಗಳಿದ್ದರೆ ಅದು ವಜ್ರವ್ಯೂಹ ಅಥವಾ ಗೋದಾವ್ಯೂಹ. [೨] ನಾಲ್ಕು ಭಾಗಗಳಿದ್ದುದಕ್ಕೆ ಉದ್ಯಾನಕ ಅಥವಾ ಕಾಕಪದೀ. [೩] ಮೂರು ಭಾಗಗಳಿದ್ದರೆ ಅರ್ಧಚಂದ್ರ ಅಥವಾ ಕರ್ಕಟಕಭೃಂಗೀ. ಅರಿಷ್ಟವ್ಯೂಹದಲ್ಲಿ ಮುಂದೆ ರಥ, ಮಗ್ಗಲಿಗೆ ಆನೆ, ಹಿಂದೆ ಕುದುರೆದಳ ನಿಂತಿರುತ್ತವೆ. ಪದಾತಿ, ಕುದುರೆದಳ, ರಥ ಮತ್ತು ಆನೆ ಇವು ಒಂದರ ಹಿಂದೊಂದು ನಿಂತ ವ್ಯೂಹಕ್ಕೆ ಅಚಲ ವ್ಯೂಹವೆನ್ನುತ್ತಾರೆ. ಇದರ ವಿರುದ್ಧವಾಗಿ ನಿಂತ ವ್ಯೂಹಕ್ಕೆ ಅಪ್ರತಿಹತ ವ್ಯೂಹವೆನ್ನುವರು. ಮುಂದುಗಡೆ ಸೈನ್ಯಕ್ಕೆ ಭೀತಿಯಿದ್ದಾಗ ಮಕರ ಅಥವಾ ಶ್ಯೇನ ವ್ಯೂಹವನ್ನು ಅಥವಾ ಸೂಚಿವ್ಯೂಹವನ್ನು ರಚಿಸಬೇಕು. ಹಿಂದುಗಡೆಯಿಂದ ಭೀತಿಯಿದ್ದರೆ ಶಕಟವ್ಯೂಹ ರಚಿಸಬೇಕು. ಎರಡೂ ಮಗ್ಗಲುಗಳಿಂದ ಭೀತಿಯಿದ್ದರೆ ವಜ್ರವ್ಯೂಹ ರಚಿಸಬೇಕು. ಮತ್ತು ನಾಲ್ಕೂ ಕಡೆಯಿಂದ ಭೀತಿಯಿದ್ದರೆ ಸರ್ವತೋಭದ್ರ ಅಥವಾ ಸರ್ಪವ್ಯೂಹವನ್ನು ರಚಿಸಬೇಕು. ಇದಲ್ಲದೆ, ಶತ್ರುವು ಇಂತಹ ವ್ಯೂಹವನ್ನು ರಚಿಸಿದರೆ ಆತನ ಕೂಡ ಯುದ್ಧ ಮಾಡುವಾಗ ತಾವು ಇಂತಿಂಥ ವ್ಯೂಹಗಳನ್ನು ರಚಿಸಬೇಕೆಂದು ಹೇಳಿದೆ. ವಿಸ್ತಾರ ಭಯದಿಂದ ಅದನ್ನು ಇಲ್ಲಿ ಕೊಡುವುದಿಲ್ಲ.

ಇವುಗಳ ಪ್ರಮಾಣವು ಬಹುಶಃ ಮುಂದೆ ಬರೆದಂತೆ ಇರುತ್ತಿತ್ತು. [೧] ೩೦೦ ಪಾದದಳ, ೮೦ ಕುದುರೆದಳ, ೧ ರಥ, ೨ ಬೃಹನ್ನಾಲಿಕಾ [ತೋಫು], ೧೦ ಒಂಟೆ, ೨ ಆನೆಗಳು, ೨ ಗಾಡಿಗಳು, ೧೬ ಎತ್ತುಗಳು, ೬ ಲೇಖಕರು, ೩ ಮಂತ್ರಿಗಳು.

ದೊಡ್ಡ ದೊಡ್ಡ ಅರಸರ ಹತ್ತರ ಹಡಗುಪಡೆಇರುತ್ತಿತ್ತು. ಹಡಗುಪಡೆಯ ಮುಖ್ಯಸ್ಥನಿಗೆ ನಾವಾಧ್ಯಕ್ಷನೆನ್ನುತ್ತಿದ್ದರು. ಕಾಮರೂಪ ಅಂದರೆ ಆಸಾಮದ ಅರಸನ ಹತ್ತರ ೩೦,೦೦೦ ಹಡಗುಗಳಿದ್ದವೆಂದು ಚೀನ ಪ್ರವಾಸಿಯಾದ ಹುಯೆನ್‌ಸಾಂಗನು ಬರೆದಿಟ್ಟಿದ್ದಾನೆ.

**ಸೈನ್ಯದ ಅಧಿಕಾರಿಗಳು:–** ಚತುರಂಗ ಸೈನ್ಯದ ೧೦ ಘಟಕಗಳ ಮೇಲಿನ ಅಧಿಕಾರಿಗೆ ಪದಿಕನೆಂದು ಹೆಸರು. ೧೦ ಪದಿಕರ ಮೇಲಿನ

ಅಧಿಕಾರಿಗೆ ಸೇನಾಪತಿಯೆಂದು ಹೆಸರು. ೧೦ ಸೇನಾಪತಿಗಳ ಮೇಲಿನ ಅಧಿಕಾರಿಗೆ ನಾಯಕನೆಂದು ಹೆಸರು.

ಕಂದಕಗಳನ್ನು ಅಗಿದು ಯುದ್ಧಮಾಡುವುದು, ನಿಶಾನೆಗುರುತುಗಳನ್ನು ತೋರಿಸುವುದು, ಲಷ್ಕರಿ ವಾದ್ಯಬಾರಿಸುವುದು. ಇವೇ ಮುಂತಾದವುಗಳು ನಮ್ಮ ಜನರಿಗೆ ಗೊತ್ತಿದ್ದವು. ದುರ್ಗಗಳನ್ನು ಕಟ್ಟುವುದರಲ್ಲಿ ಅವರು ಪ್ರವೀಣರಿದ್ದರು. ವೇದಕಾಲದಲ್ಲಿಯೂ ಕೂಡ ಈ ಕೋಟೆ ಕಟ್ಟುವ ಕಲೆ ಅವರಿಗೆ ಗೊತ್ತಿತ್ತು. ಮಾನಸಾರವೆಂಬ, ಕಟ್ಟಡದ ಸಂಬಂಧದ ಪುಸ್ತಕದಲ್ಲಿ ಕೋಟೆಯ ಅನೇಕ ಪ್ರಕಾರಗಳು ಕೊಡಲ್ಪಟ್ಟಿವೆ. ಅವು ಯಾವುವೆಂದರೆ [೧] ಶಿಬಿರ [೨] ವಾಹಿನೀಮುಖ [೩] ಸ್ಥಾನೀಯ [೪] ಸಂಸಿದ್ಧಿ [೫] ಕೊಲಕ [೬] ನಿಗಮ [೭] ದ್ರೋಣಕ [೮] ಸ್ಕಂಧಾವಾರ.

**ಯುದ್ಧದ ನಿಯಮಗಳು**:- ಯುದ್ಧದ ನಿಯಮಗಳು ಬಹಳ ಸುಧಾರಿಸಿದ್ದವು. ಯುದ್ಧಮಾಡುವವರು ಯುದ್ಧದಲ್ಲಿ ತೊಡಗಿರದ ಜನರನ್ನು ಎಂದೂ ಹೊಡೆಯುತ್ತಿರಲಿಲ್ಲ. ಅಥವಾ ಅವರ ಹೆಂಗಸರ ಮತ್ತು ಮಕ್ಕಳ ಉಸಾಬರಿಗೆ ಹೋಗುತ್ತಿರಲಿಲ್ಲ. ಶತ್ರುಪ್ರದೇಶದಲ್ಲಿಯ ಬೆಳೆಗಾಗಲಿ, ಚಲೋ ಗಿಡಗಳಿಗಾಗಲಿ ಕೈಹಚ್ಚುತ್ತಿರಲಿಲ್ಲ. ಶತ್ರುಗಳು ತಮ್ಮ ಪ್ರದೇಶದ ಬೆಳೆಯನ್ನು ಹಾಳು ಮಾಡಲಿಕ್ಕೆ ಸಜ್ಜರಾದಾಗ ಅವರ ಪ್ರದೇಶವನ್ನು ಲೂಟ ಮಾಡಲು ಅಡ್ಡಿ ಇಲ್ಲವೆಂದು ಚಾಣಕ್ಯನು ಹೇಳುತ್ತಾನೆ. ಮೆಗಾಸ್ಥನೀಸನಾದರೂ ಇದಕ್ಕೆ ಸಾಕ್ಷಿಯಾಗಿದ್ದಾನೆ.

ಕೌಟಿಲ್ಯನು [೧] ಸರ್ವತೋಭದ್ರ [೨] ಜಾಮದಗ್ನ್ಯ [೩] ಶತಘ್ನೀ ಮುಂತಾದ ಯುದ್ಧ ಯಂತ್ರಗಳ ಹೆಸರುಗಳನ್ನು ಕೊಟ್ಟಿರುವನು. ಸುರಂಗ ಹಾಕುವ ಕಲೆಯು ನಮ್ಮ ಜನರಿಗೆ ಗೊತ್ತಿತ್ತು. ಮದ್ದು ಮತ್ತು ಉರಿಯುವ ದ್ರಾವಕಗಳೇ ಮುಂತಾದವುಗಳು ಕೂಡ ನಮ್ಮ ಜನರಿಗೆ ಗೊತ್ತಿದ್ದವೆಂದು ಡಾ. ಶ್ಯಾಮಶಾಸ್ತ್ರಿಗಳ ಅಭಿಪ್ರಾಯ. [ಅರ್ಥಶಾಸ್ತ್ರ. ಪು. ೧೩. ಅ. ೪ ಶುಕ್ರನೀತಿಸಾರ ಅ. ೪, ೧೦೨೮-೧೦೪೪] ಯುದ್ಧದಲ್ಲಿ ವೈದ್ಯರೂ ಪಶು ಚಿಕಿತ್ಸಕರೂ ಇರುತ್ತಿದ್ದರು.

ಸೈನಿಕರು ಊರೊಳಗಿನ ಜನರೊಡನೆ ಯಾವದೇ ತರಹದ ಹಣದ ವ್ಯವಹಾರ ಮಾಡಕೂಡದೆಂಬ ಬಗ್ಗೆ ಅರಸನು ಎಚ್ಚರವಿರುತ್ತಿದ್ದನು. ಅವರ ಸಲುವಾಗಿ ಪ್ರತ್ಯೇಕ ಅಂಗಡಿಗಳು, ಪ್ರತ್ಯೇಕ ಸಂಗತಿಗಳು. ಒಂದು ಪಟ್ಟಣದಲ್ಲಿ ಅಥವಾ ಪ್ರದೇಶದಲ್ಲಿ ಒಂದು ವರ್ಷಕ್ಕಿಂತ ಹೆಚ್ಚು ದಿವಸ ಅವರು ನಿಲ್ಲತಕ್ಕದ್ದಲ್ಲ. ಹೀಗೆ ಸೈನಿಕರಿಂದ ಜನರಿಗೆ ಆದಷ್ಟು ತ್ರಾಸ ಆಗದಂತೆ ಎಚ್ಚರಿಕೆಯನ್ನು ತೆಗೆದುಕೊಳ್ಳುತ್ತಿದ್ದರು.

---

## ೧೬ನೆಯ ಪ್ರಕರಣ

# ಕರ ಅಥವಾ ಅರ್ಥವಿಭಾಗ



ಕರವನ್ನು ಕೂಡಿಸುವ ಪದ್ಧತಿಯು ಆಗ ನಿಯಮಬದ್ಧವಾಗಿತ್ತೆಂಬುದಕ್ಕೆ ಐತಿಹಾಸಿಕ ಆಧಾರಗಳುಂಟು. ಈಗಿನ ಅರ್ಥಶಾಸ್ತ್ರದ ಭಾಷೆಯಲ್ಲಿ ಹೇಳುವುದಾದಲ್ಲಿ, ಸಾಮರ್ಥ್ಯ ಮತ್ತು ಆದಷ್ಟು ತೀರ ಕಡಿಮೆ ತ್ಯಾಗ ಇವೆರಡು ತತ್ವಗಳ ಮೇಲೆ ಹಿಂದಿನ ಕಾಲದ ಅರ್ಥವಿಭಾಗದ ರಚನೆಯಾಗಿತ್ತು.

ತೀರ ಪ್ರಾಚೀನ ಕಾಲದಲ್ಲಿ, ಜನತೆಯ ಮೇಲೆ ಕರದ ಭಾರವು ಬಹಳ ಕಡಿಮೆಯಾಗಿತ್ತು. ಆದರೆ ಸರಕಾರದ ಕರ್ತವ್ಯಗಳು ಬೆಳೆಯುತ್ತ ಹೋದಂತೆ ಜನರ ಮೇಲಿನ ಕರದ ಭಾರವೂ ಮೆಲ್ಲಮೆಲ್ಲನೆ ಬೆಳೆಯಿತು.

**ಕರಪದ್ಧತಿಯ ತತ್ವಗಳು:-**

**ಯಥಾ ವಿಕ್ರಿಯಾಣಾಂ ಮೂಲಂ ಧನನಾಶೋ ಭವೇನ್ನ ಹಿ।**
**ತಥಾ ಶುಲ್ಕಂ ಹರತಿ ಶೌಲ್ಕಿಕಃ ಸ ಉದಾಹೃತಃ ॥**

ಶು. ಅ. ೨

ಮೂಲಧನದ ನಾಶವು ಆಗದಂತೆ ಎಚ್ಚರವಿಟ್ಟು ಕರವನ್ನು ವಸೂಲ ಮಾಡಬೇಕೆಂದು ಇದರ ಭಾವಾರ್ಥ. ಮನು (೭-೧೩೯) ಶಾಂತಿ

ಪರ್ವ (ಅ. ೭೧. ಶ್ಲೊ. ೧೩) ವಸಿಷ್ಠ (೧೦-೧೪) ಆಪಸ್ತಂಬ (೨-೧೦-೨೬-೯) ಇವೇ ಮುಂತಾದ ಗ್ರಂಥಗಳಲ್ಲಿಯೂ ಇದೇ ಪ್ರಕಾರದ ತತ್ವವು ಹೇಳಲ್ಪಟ್ಟದೆ. ಕೌಟಿಲ್ಯನು ನಿಯಮಿತ ಕರಕ್ಕಿಂತ ಹೆಚ್ಚಿನ ಕರಗಳನ್ನು ವಸೂಲ ಮಾಡುವ ಅಧಿಕಾರಿಗಳ ಸಂಬಂಧವಾಗಿ ಮುಂದೆ ಬರೆದಂತೆ ಉದ್ಗಾರಗಳನ್ನು ತೆಗೆದಿರುವನು. "ನಿಯಮಿತ ಕರಕ್ಕಿಂತ ಇಮ್ಮಡಿ ಕರವನ್ನು ವಸೂಲ ಮಾಡುವವನು ಪ್ರಜೆಗಳ ರಕ್ತವನ್ನು ಕುಡಿಯುವವನೇ ಸರಿ."

**ಭೂಮಿಯ ಕಂದಾಯದ ಪ್ರಮಾಣ:-** ಆಯಾ ಭೂಮಿಯ ಯೋಗ್ಯತೆಯ ಮಾನದಿಂದ ಮತ್ತು ಬೆಳೆ ತೆಗೆಯಲಿಕ್ಕೆ ಬೇಕಾಗುವ ಖರ್ಚಿನ ಮಾನದಿಂದ ಉತ್ಪನ್ನದಲ್ಲಿ ೧/೧೨, ೧/೮ ಅಥವಾ ೧/೬ ಭಾಗದ ವರೆಗೆ ಕಂದಾಯವು ಇತ್ತು. ಅಡಚಣಿಯ ಕಾಲದಲ್ಲಿ ಇದನ್ನು ೧/೪ ದ ವರೆಗೆ ಬೆಳಿಸುವ ಅಧಿಕಾರವು ರಾಜನಿಗೆ ಇತ್ತು. ಭೂಮಿಯ ಕಂದಾಯವು ಸರಕಾರದ ಉತ್ಪನ್ನದಲ್ಲಿ ಮುಖ್ಯ ಉತ್ಪನ್ನವು. (Elphinstone's History of India ಪುಟ ೨೩. ಮತ್ತು ಕುಲ್ಲುಕಭಟ್ಟನ ಟೀಕೆ ನೋಡಿರಿ.) ಅರಸನು ರಾಜ್ಯದೊಳಗಿನ ಭೂಮಿಯ ಒಡೆಯನಲ್ಲ, ಅದರ ಉತ್ಪನ್ನದಲ್ಲಿ ಕೆಲವು ಭಾಗ ಕಂದಾಯವನ್ನು ತೆಗೆದುಕೊಳ್ಳಲಿಕ್ಕೆ ಮಾತ್ರ ಬಾಧ್ಯಸ್ಥನು. ಅರಸನ ಖಾಸಗೀ ಭೂಮಿಗಳೂ ಇರುತ್ತಿದ್ದವು. ಭೂಮಿಗಳು ಹೆಚ್ಚಾದಂತೆ, ಜನರ ಮೇಲಿನ ಕಂದಾಯದ ಭಾರವೂ ಕಡಿಮೆಯಾಯಿತು.

ವರ್ತಕರಿಗೆ ಲಾಭವಾಗಿದ್ದರೆ ಮಾತ್ರ ಅವರಿಂದ ಕರವನ್ನು ವಸೂಲ ಮಾಡತಕ್ಕದ್ದು; ಇಲ್ಲದಿದ್ದರೆ ಇಲ್ಲ. ಈ ಕರದ ಪ್ರಮಾಣವು ೧೦೦ ಕ್ಕೆ ೫ ರಿಂದ ೧೦ ರ ವರೆಗೆ ಇರುತ್ತಿತ್ತು. ಪ್ರಜೆಗಳಿಗೆ ಅತಿಶಯ ಉಪಯೋಗವಾಗುವ ಬೀಜ ಮುಂತಾದವುಗಳ ಮೇಲೆ ಕರವಿದ್ದಿಲ್ಲ. ಅಲ್ಲದೆ ದೇವರ ಪೂಜೆಗೋಸ್ಕರ ಮತ್ತು ಲಗ್ನಸಮಾರಂಭದ ಸಲುವಾಗಿ ಹತ್ತುವ ಪದಾರ್ಥಗಳ ಮೇಲೆ ಕರವು ಮಾಫೀ ಇತ್ತು. ಕರ ಕೊಡುವುದನ್ನು ಯಾರೂ ತಪ್ಪಿಸದಂತೆ ಮಾಡುವ ಸಲುವಾಗಿ, ಮಾಲು ಹುಟ್ಟಿದ ಸ್ಥಳದಲ್ಲಿ ಅದನ್ನು ಮಾರದೆ ಸಂತೆ ಪೇಟೆ

ಗಳಿಗೆ ಹೋಗಿ ಅದನ್ನು ಮಾರಬೇಕೆಂದು ನಿರ್ಬಂಧವಿತ್ತು. ರಸ್ತೆಯ ಮೇಲೆ ಅಥವಾ ಪೇಟೆಯಲ್ಲಿ ಅದರ ಕರವು ವಸೂಲ ಮಾಡಲ್ಪಡುತ್ತಿತ್ತು.

ಗ್ರಾಮದಲ್ಲಿ ಸರಕಾರದ ಉತ್ಪನ್ನದ ಬಾಬುಗಳೆಂದರೆ (೧) ಸರಕಾರದ ಮಾಲಕಿಯ ಭೂಮಿಯ ಉತ್ಪನ್ನ (೨) ಜನರ ಒಡೆತನದ ಭೂಮಿಯ ಉತ್ಪನ್ನದಲ್ಲಿಯ ಇಂತಿಷ್ಟು ಭಾಗ (೩) ಭೂಮಿಯ ಮೇಲಿನ ಕಿರಕುಳ ಕರಗಳು (೪) ನಾವು, ಡೋಣಿ ಮುಂತಾದವುಗಳ ಸಂಬಂಧದ ಕರ (೫) ರಸ್ತೇದ ಮೇಲಿನ ಸುಂಕದ ಉತ್ಪನ್ನ. ಪರದೇಶದಿಂದ ಬರುವ ಮಾಲಿನ ಮೇಲೆ ಕರವು ಕಡಿಮೆ ಇತ್ತು. ಕೆಲವು ಪ್ರಸಂಗಗಳಲ್ಲಿ, ಪರದೇಶದ ವ್ಯಾಪಾರಸ್ಥರಿಗೆ ವಿಶೇಷ ಸೌಕರ್ಯಗಳು ಕೊಡಲ್ಪಡುತ್ತಿದ್ದವು.

ಹೊಸ ಕರವನ್ನೂ ಶುಲ್ಕವನ್ನೂ ಕೂಡಿಸುವುದರಿಂದ ಪ್ರಜೆಗಳು ಉದ್ವಿಗ್ನರಾಗುತ್ತಾರಾದುದರಿಂದ ಆದಷ್ಟು ಮಟ್ಟಿಗೆ ರಾಜನು ಹಾಗೆ ಮಾಡಬಾರದೆಂದು ನಿಯಮವಿತ್ತು. (ಶುಕ್ರ. ಅ. ೨. ೨೬೪) ಶುಲ್ಕವೆಂದರೆ ವ್ಯಾಪಾರಸ್ಥರಿಂದಲೂ ಗಿರಾಕೆಗಳಿಂದಲೂ ವಸೂಲ ಮಾಡಲ್ಪಡುವ ರಾಜಭಾಗವು. ಪದಾರ್ಥಗಳ ಮೇಲಿನ ಶುಲ್ಕವನ್ನು ರಾಜನು ಒಮ್ಮೆ ಮಾತ್ರ ವಸೂಲ ಮಾಡತಕ್ಕದ್ದು. ಪ್ರಜೆಗಳನ್ನು ಛಲಿಸಿ ಮೇಲಿಂದ ಮೇಲೆ ಶುಲ್ಕವನ್ನು ತೆಗೆದುಕೊಳ್ಳತಕ್ಕದ್ದಲ್ಲ. ವ್ಯಾಪಾರಸ್ಥರು ಕೊಡತಕ್ಕ ಕರದ ಕನಿಷ್ಠ ಮರ್ಯಾದೆಯು ೧/೩೨ ಭಾಗವಿತ್ತು. ಪ್ರಸಂಗ ವಿಶೇಷಗಳಲ್ಲಿ ವ್ಯಾಪಾರಸ್ಥರಿಗೆ ಹೆಚ್ಚಿಗೆ ಲಾಭವಾದಾಗ ಈ ಮರ್ಯಾದೆಯು ೧/೨೦ ದಿಂದ ೧/೧೬ ದ ವರೆಗೆ ಬೆಳಿಸಲ್ಪಡುತ್ತಿತ್ತು.

**ಕರ ಕೊಡುವುದಕ್ಕೆ ಪಾತ್ರಾಪಾತ್ರತೆ:–** ವಿದ್ಯಾರ್ಜನ ಮತ್ತು ವಿದ್ಯಾಪ್ರದಾನಗಳಲ್ಲಿ ತೊಡಗಿದ ಬ್ರಾಹ್ಮಣರಿಗೆ ಮಾತ್ರವೇ ಕರವು ಮಾಫೀ ಇತ್ತು. ಆದರೆ ಕೆಳಗಿನ ವರ್ಣದವರು ಮಾಡುವ ಉದ್ಯೋಗಗಳನ್ನು ಬ್ರಾಹ್ಮಣನು ಕೈಕೊಂಡರೆ ಆತನಿಂದಲೂ ಕರವು ತೆಗೆದುಕೊಳ್ಳಲ್ಪಡುತ್ತಿತ್ತು. ಅಲ್ಲದೆ, ಹೆಂಗಸರು. ಅಲ್ಪವಯಿ ಮಕ್ಕಳು, ವಿದ್ಯಾರ್ಥಿಗಳು, ಕುರುಡರು, ಕುಂಟರು, ಮೂಕರು, ಮತ್ತು ವ್ಯಾಧಿ

ಗ್ರಸ್ತರು ಇವರೇ ಮುಂತಾದವರಿಗೆ ಕರದ ಮಾಫೀ ಇತ್ತು (ಆಪಸ್ತಂಬ ೨. ೧೦-೨೬-೧೪-೧೭). ವಸಿಷ್ಠ, ಮನು, ವಿಷ್ಣು ಮತ್ತು ಚಾಣಕ್ಯ ಇವರ ಗ್ರಂಥಗಳಲ್ಲಿಯೂ ಹೀಗೆಯೇ ಹೇಳಿದೆ. ವಿದ್ವಾಂಸ ಬ್ರಾಹ್ಮಣರಿಗೆ ಕರವನ್ನು ಮಾಫೀ ಮಾಡುವ ಕಾರಣವೇನೆಂದರೆ- ಅವರ ಪುಣ್ಯದ ೧/೬ ಭಾಗವು ರಾಜನಿಗೆ ಮುಟ್ಟುತ್ತದೆಂದೂ ಅದರಿಂದ ಸರ್ವರಾಜ್ಯದ ಐಹಿಕ ಮತ್ತು ಪಾರಲೌಕಿಕ ಕಲ್ಯಾಣವಾಗುತ್ತದೆಂದೂ ಆಗಿನ ಕಾಲದ ಸಮಾಜದಲ್ಲಿ ದೃಢಭಾವನೆಯಿತ್ತು.

ರಾಜನು ತನ್ನ ರಾಜ್ಯದಲ್ಲಿಯ ಪಲ್ಯ, ಎಲೆಬಳ್ಳಿ ಮುಂತಾದ ಅಲ್ಪ ಬೆಲೆಯುಳ್ಳ ಪದಾರ್ಥಗಳನ್ನು ಮಾರುವ ಮತ್ತು ನಿಕೃಷ್ಟ ಸ್ಥಿತಿಯಲ್ಲಿರುವ ಜನರಿಂದಲೂ ಸ್ವಲ್ಪಾದರೂ ಕರವನ್ನು ತೆಗೆದುಕೊಳ್ಳಬೇಕಲ್ಲದೆ ಅವರಿಗೆ ಮಾಫೀ ಕೊಡಬಾರದೆಂದು ಮನುಸ್ಮೃತಿಯಿಂದ ಗೊತ್ತಾಗುತ್ತದೆ. (ಮನು. ೭. ೧೩೭). ವಿಶೇಷ ಅಡಚಣೆಯ ಪ್ರಸಂಗಗಳಲ್ಲಿ ಪ್ರಜೆಗಳಿಂದ ಅರಸನು ಕಾಣಿಕೆಗಳನ್ನು ತೆಗೆದುಕೊಳ್ಳತಕ್ಕದ್ದು.

**ಕರವನ್ನು ವಸೂಲ ಮಾಡುವ ಪದ್ಧತಿ:-** ಕರವು ಹಣದ ರೂಪದಿಂದ ಅಥವಾ ಆಯಾ ಪದಾರ್ಥಗಳ ರೂಪದಿಂದ ವಸೂಲ ಮಾಡಲ್ಪಡುತ್ತಿತ್ತು. ಕೆಲವೊಮ್ಮೆ ಕರದ ಕೆಲವು ಭಾಗವು ಹಣದ ರೂಪದಲ್ಲಿಯೂ ಮತ್ತೆ ಕೆಲವು ಭಾಗವು ಪದಾರ್ಥದ ರೂಪದಲ್ಲಿಯೂ ವಸೂಲ ಮಾಡಲ್ಪಡುತ್ತಿತ್ತು. ವಿಧವಿಧದ ಉದ್ಯೋಗಗಳನ್ನು ಮಾಡುವವರು, ಶೂದ್ರರು ಮತ್ತು ಕೂಲಿಕಾರರು ಅಂದರೆ ಪ್ರಾಚೀನ ಭಾಷೆಯಲ್ಲಿ ಹೇಳುವುದಾದರೆ ಕರ್ಮಜೀವಿಗಳು ತಿಂಗಳಲ್ಲಿ ಎರಡು ದಿವಸ ಸರಕಾರದ ಕೆಲಸದ ಬಿಟ್ಟಿಯನ್ನು ಮಾಡಬೇಕೆಂದು ಶುಕ್ರನೀತಿಯ ಕಾಲಕ್ಕೆ ನಿಯಮವಿತ್ತು. ಮನುಸ್ಮೃತಿ ಮತ್ತು ವಿಷ್ಣು ಸ್ಮೃತಿಗಳ ಕಾಲದಲ್ಲಿ, ತಿಂಗಳಿಗೆ ಒಂದು ದಿವಸ ಬಿಟ್ಟೀ ಕೆಲಸ ಮಾಡಬೇಕೆಂದು ನಿಯಮವಿತ್ತು. (ಮನು. ೮-೧೩೭, ವಿಷ್ಣು. ೩. ೩). ಜನರ ಕಡೆಯಿಂದ ಆದಷ್ಟು ಮಟ್ಟಿಗೆ ಹಣದ ರೂಪದಲ್ಲಿಯೇ ಕರವನ್ನು ವಸೂಲ ಮಾಡಬೇಕೆಂದು ಚಾಣಕ್ಯನು ಅರ್ಥಶಾಸ್ತ್ರದಲ್ಲಿ ಹೇಳಿರುವನು.

ಮುಖ್ಯ ಮುಖ್ಯ ಪದಾರ್ಥಗಳ ಮೇಲಿದ್ದ ಕರಗಳ ಕೋಷ್ಟಕವು ಕೆಳಗೆ ಕೊಡಲ್ಪಟ್ಟಿದೆ.

| ಪದಾರ್ಥಗಳು | ಚಾಣಕ್ಯ | ಶುಕ್ರನೀತಿ | ಮನುಸ್ಮೃತಿ | ವಿಷ್ಣುಸ್ಮೃತಿ | ಗೌತಮಸ್ಮೃತಿ |
|---|---|---|---|---|---|
| ಭೂಮಿಯಿಂದಾಯ | | ೧/೩, ೧/೫. ೧/೭ ಅಥವಾ ೧/೧೦ | ೧/೮, ೧/೬, ೧/೧೨ | | |
| ತೃಣಕಾಷ್ಠ | | ೧/೨೦ | | | |
| ಸುವರ್ಣ | | ೧/೩ | ೧/೫೦ | | |
| ಬೆಳ್ಳಿ | | ೧/೩ | | | |
| ತಾಮ್ರ | | ೧/೪ | | | |
| ಲೋಹ. ವಂಗ ಶೀಸು | | ೧/೬ | | | |
| ರತ್ನ | | ಖರ್ಚು ಹೋಗಲಾಗಿ ೧/೨ | | | |
| ಲವಣ | | ೧/೬ | | | |
| ಮಾಂಸ | | ೧/೬ | ೧/೬ | ೧/೬೦ | |
| ಹಣ್ಣುಹಂಪಲ | | ,, | ,, | ,, | |
| ಪುಷ್ಪ | | ,, | ,, | ,, | |
| ದನ | | | ೧/೫೦ | ೧/೫೦ | |
| ವಸ್ತ್ರ | | | ೧/೫೦ | | |
| ತಯಾರಾದ ಒಡವೆಗಳು | | | ೧/೧೦ | | |
| ಆಯಾತ ಮಾಲು | | | ೧/೨೦ | | |
| ವೃಕ್ಷ | | ೧/೬ | | | |
| ಮಧು | | ,, | ೧/೬೦ | | |
| ತುಪ್ಪ | | ,, | | | |
| ಸುಗಂಧಿ ಪದಾರ್ಥ | | ,, | | | |

ಕರ ವಸೂಲಿಯ ಮುಖ್ಯ ಸ್ಥಾನಗಳು:- (೧) ರಾಜಧಾನಿ (೨) ಗ್ರಾಮ (೩) ಕಣಿಗಳು (೪) ಸಾರ್ವಜನಿಕ ಸ್ಥಾನಗಳು (೫) ಅಡವಿ (೬) ಹುಲಬನ್ನಿ (೭) ವ್ಯಾಪಾರೀ ಮಾರ್ಗ.

**ಕರಕೊಡುವ ಪದ್ಧತಿಯಿಂದ ದೇಶವಿಭಾಗಗಳು:-** (೧) ಕರವು ಪೂರ್ಣ ಮಾಫೀ ಇದ್ದ ಗ್ರಾಮಗಳು ಅಂದರೆ ಪರಿಹಾರಕಗಳು (೨) ಕರದ ಬದಲು ದೇಶದ ಸಂರಕ್ಷಣೆಗೋಸ್ಕರ ಸೈನಿಕರನ್ನು ಪೂರೈಸುವ ಗ್ರಾಮಗಳು ಅಂದರೆ ಆಯುಧೀಯ (೩) ಬಂಗಾರದ ರೂಪದಲ್ಲಿ ಕರವನ್ನು ಕೊಡುವ ಗ್ರಾಮಗಳು (೪) ಕರದ ಬದಲು ಉತ್ಪನ್ನವಾಗುವ ಮಾಲನ್ನು ಕೊಡುವ ಗ್ರಾಮಗಳು (೫) ಬಿಟ್ಟಿಯ ರೂಪದಲ್ಲಿ ಕರ ಕೊಡುವ ಗ್ರಾಮಗಳು- ವಿಷ್ಟಿ (ಅರ್ಥಶಾಸ್ತ್ರ ಪುಸ್ತಕ ೨. ಅ. ೭).

ಸರಕಾರದ ಉತ್ಪನ್ನಗಳಲ್ಲಿ ಮುಖ್ಯ ಉತ್ಪನ್ನವು ಭೂಮಿಯ ಕಂದಾಯವು. ಅದರ ತರುವಾಯದ ಮುಖ್ಯ ಉತ್ಪನ್ನವೆಂದರೆ ಖನಿಜ ಪದಾರ್ಥಗಳ ಮೇಲಿನ ಕರ. ಖನಿಜ ಪದಾರ್ಥಗಳ ಮೇಲಿನ ಈ ಕರವು ಅನೇಕ ರೀತಿಯಿಂದ ಬರುತ್ತಿತ್ತು. (೧) ಖನಿಜ ಪದಾರ್ಥಗಳನ್ನು ಹುಟ್ಟಿಸುವದಕ್ಕೆ ಕರ (೨) ಹುಟ್ಟಿಸಿದ ಪದಾರ್ಥದಲ್ಲಿ ಪಾಲು (೩) ಮತ್ತು ಅದರ ಮೇಲೆ ೧೦೦ ಕ್ಕೆ ೫ರಂತೆ ಕರ (೪) ಧಾತುಗಳನ್ನು ಪರೀಕ್ಷಿಸುವುದಕ್ಕೆ ಕರ (೫) ದಂಡ (೬) ಜಕಾತಿ (೭) ನಾಣ್ಯಮಾಡಿ ಕೊಡುವುದಕ್ಕೆ ಕರ ಇವೇ ಮುಂತಾದವುಗಳು.

ಸಮಾಹರ್ತನೆಂಬವನು ಮುಖ್ಯ ಮುಲಕೀ ಅಧಿಕಾರಿಯು. ಆತನ ಕೈಕೆಳಗೆ ಅನೇಕ ಸ್ಥಾನಿಕರೆಂಬವರೂ ಗೋಪರೆಂಬವರೂ ಕಂದಾಯ ವಸೂಲಮಾಡತಕ್ಕ ಅಧಿಕಾರಿಗಳಿರುತ್ತಿದ್ದರು. ಗೋಪನ ಕೈಯಲ್ಲಿ ೫ ರಿಂದ ೧೦ ರ ವರೆಗೆ ಗ್ರಾಮಗಳು ಇರುತ್ತಿದ್ದವು. ಸ್ಥಾನಿಕನೆಂಬವನು ಅನೇಕ ಗೋಪರ ಮೇಲಿನ ಅಧಿಕಾರಿ. ಸ್ಥಾನಿಕನ ಮೇಲಿನ ಅಧಿಕಾರಿಯು ಪ್ರದೇಷ್ಟಾ ಎಂಬವನು. ಅವನ ಮೇಲಿನ ಅಧಿಕಾರಿ ಸಮಾಹರ್ತನು.

**ಅಂದಾಜ ಪತ್ರಿಕೆ:-** (ಶುಕ್ರನೀತಿ ಅ. ೧. ಶ್ಲೋಕ ೩೧೪-೩೧೫) ಆ ಕಾಲದಲ್ಲಿ ಜಮಾಖರ್ಚಿನ ಅಂದಾಜ ಪತ್ರಿಕೆಯನ್ನು ಮಾಡುವ ಪದ್ಧತಿಯಿತ್ತೆಂದು ಗೊತ್ತಾಗುತ್ತದೆ. ಸರಕಾರದ ಉತ್ಪನ್ನದ ಅರ್ಧ ಭಾಗದಲ್ಲಿ ಪ್ರಧಾನಮಂಡಳದ ಸಂಬಳ ೧/೧೨; ಸೈನ್ಯ ೩/೧೨; ದಾನ ೧/೨೪; ಲೋಕೋಪಯೋಗಿ ಕಾರ್ಯ ೧/೨೪; ರಾಜನ ಖಾಸಗೀ ಭೂಮಿ ೧/೨೪; ಅಧಿಕಾರಿಗಳ ಸಂಬಳ ೧/೨೪; ಹೀಗೆ ಮುಖ್ಯಖರ್ಚಿನ ವಿಷಯುಗಳಿದ್ದವು. ಮತ್ತು ಅರ್ಧ ಭಾಗವು ತಿಜೋರಿಯಲ್ಲಿ ಶಿಲ್ಕು ಇಡಲ್ಪಡುತ್ತಿತ್ತು. ಸಾರ್ವಜನಿಕ ಖರ್ಚಿನ ಸಲುವಾಗಿ ೨೦ ವರ್ಷಗಳ ವರೆಗೆ ಸಾಕಾಗುವಷ್ಟು ಹಣವು ಯಾವಾಗಲೂ ತಿಜೋರಿಯಲ್ಲಿ ಸಿಲುಕು ಇಡಲ್ಪಟ್ಟಿರಬೇಕೆಂದು ಶುಕ್ರನೀತಿಯು ಪ್ರತಿಪಾದಿಸುತ್ತದೆ. (ಶು. ೪-೨-೧೩. ಕೋಶಪ್ರಕರಣ ೪-೧೨೮). ಪ್ರತಿವರ್ಷ ಆಷಾಢ ಮಾಸದಲ್ಲಿ, ಎಲ್ಲರೂ ಸರಕಾರಕ್ಕೆ ಲೆಕ್ಕಪತ್ರಗಳನ್ನು ಒಪ್ಪಿಸಬೇಕಾಗುತ್ತಿತು. (ಅರ್ಥ. ಪು. ೨. ಅ. ೭). ಶ್ರೀ. ಬಾನರ್ಜಿಯವರು ಶುಕ್ರ ೧-೩೧೪-೧೫ ಇವುಗಳಿಗೆ ಮೇಲ್ಕಾಣಿಸಿದಂತೆ ಅರ್ಥ ಮಾಡಿರುವರು. ಆದರೆ ಅದು ಸ್ವಲ್ಪ ತಪ್ಪು ಇರುತ್ತದೆಂಬುದು ಆ ಶ್ಲೋಕಗಳಿಂದ ಸ್ಪಷ್ಟವಾಗುತ್ತದೆ. ಲೆಕ್ಕಪತ್ರಗಳನ್ನಿಡುವ ಖಾತೆಯು ಸರಕಾರದ ಮಹತ್ವದ ಖಾತೆಯಾಗಿತ್ತು. ಅನೇಕ ಗಾಣನಿಕ (Accountants) ರೂ ಸಾಂಖ್ಯಾಯಕ (Sub-accountants) ರೂ ನೀವೀಗ್ರಾಹಕ (Totalizers) ರೂ ಮತ್ತು ರೂಪದರ್ಶಕ (Coin-examiners) ರೂ ಈ ಖಾತೆಯ ಕೆಲಸವನ್ನು ನಡಿಸುತ್ತಿದ್ದರು.

ಸನ್ನಿಧಾತನಿಗೆ (Treasurer General) ಹಿಂದಿನ ೧೦೦ ವರ್ಷಗಳ ಆಯವ್ಯಯಗಳ ಜ್ಞಾನವಿರಬೇಕೆಂದೂ ಹಾಗಿದ್ದರೆ ಮಾತ್ರವೇ ಆತನು ಅಂದಾಜು ಪತ್ರಿಕೆಯನ್ನು ಚೆನ್ನಾಗಿ ತಯಾರಿಸ ಬಲ್ಲನೆಂದೂ ತಿಳಿಯಲ್ಪಡುತ್ತಿತ್ತು.

ಇವೆಲ್ಲ ಸಂಗತಿಗಳ ಮೇಲಿಂದ ಆಗಿನ ಕಾಲದಲ್ಲಿ ಕರವನ್ನು ವಸೂಲು ಮಾಡುವ ಪದ್ಧತಿಯೂ ಲೆಕ್ಕಪತ್ರಗಳನ್ನು ತಯಾರಿಸುವ ಪದ್ಧತಿಯೂ ಎಷ್ಟು ವ್ಯವಸ್ಥಿತವಾಗಿತ್ತೆಂಬುದು ಗೊತ್ತಾಗುತ್ತದೆ.

## ೧೭ನೆಯ ಪ್ರಕರಣ

# ನಗರರಚನೆ.



ಗ್ರಾಮಕ್ಕಿಂತಲೂ ನಗರರಚನೆಯು ಹೆಚ್ಚು ವ್ಯವಸ್ಥಿತವಾಗಿ ಮಾಡಲ್ಪಡುತ್ತಿತ್ತು. ನಗರವನ್ನು ಸ್ಥಾಪಿಸುವ ಮುಂಚೆ, ಅದರೊಳಗಿನ ಮಾರ್ಗಗಳೂ ಬೀದಿಗಳೂ ಗೊತ್ತುಪಡಿಸಲ್ಪಡುತ್ತಿದ್ದವು. ಮಧ್ಯವರ್ತಿ ಸ್ಥಳದಲ್ಲಿ ಅರಮನೆ ಮತ್ತು ಕಚೇರಿಗಳು ಕಟ್ಟಲ್ಪಡುತ್ತಿದ್ದವು. ಅವುಗಳ ಸುತ್ತಲು ಜನರ ಮನೆಗಳು. ನಗರದ ಸುತ್ತಲೂ ಕೋಟೆ ಕಂದಕಗಳಿರುತ್ತಿದ್ದವು. ಅರಮನೆಯ ಸುತ್ತಲೂ ಕೋಟೆ ಇರುತ್ತಿತ್ತು. ಅರಮನೆಯ ಬೈಲಿನ ನಡುವೆ ರಾಜಸಭಾಗೃಹವಿದ್ದು ಅದರ ಸುತ್ತಲು ಗೋ, ಅಶ್ವ, ಹಸ್ತಿ ಇವುಗಳ ಶಾಲೆಗಳಿರುತ್ತಿದ್ದವು. ಅರಮನೆಯು ಚಚ್ಚೌಕು ಇರುತ್ತಿತ್ತು. ಅದರ ಪ್ರಾಕಾರದಲ್ಲಿ ಶಸ್ತ್ರಾಸ್ತ್ರಧಾರಿ ಸೈನಿಕರಿರಲಿಕ್ಕೆ ಕಟ್ಟಡಗಳಿರುತ್ತಿದ್ದವು. ಮಿಕ್ಕ ನಗರಗಳೂ ರಾಜಧಾನಿಯ ಮಾದರಿಯ . ಮೇಲೆಯೇ ಇರುತ್ತಿದ್ದವು. ಶುಕ್ರನೀತಿಯ ೪ನೆಯ ಅಧ್ಯಾಯ, ಅಗ್ನಿಪುರಾಣದ ೨೨೭ನೆಯ ಅಧ್ಯಾಯ ಮತ್ತು ಅರ್ಥಶಾಸ್ತ್ರದ ಪುಸ್ತಕ ೨ ಅಧ್ಯಾಯ ೧ರಿಂದ ೩ ಇವುಗಳಲ್ಲಿ ಇದರ ವಿವರಗಳನ್ನೋದಬಹುದು. ಪಟ್ಟಣಗಳು ಏಳು ಪ್ರಕಾರದವಿದ್ದವು. [೧] ರಾಜಧಾನಿ [೨] ನಗರ [೩] ಪುರ [೪] ಖೇಟ [೫] ಖರ್ವಟ [೬] ಕುಬ್ಜಕ [೭] ಪಟ್ಟಣ. ಗ್ರಾಮುಗಳಲ್ಲಿ ಎಂಟು ಪ್ರಕಾರಗಳು [೧] ದಂಡಕ [೨] ಸರ್ವತೋಭದ್ರ [೩] ನಂದ್ಯಾವರ್ತ [೪] ಪದ್ಮಕ [೫] ಸ್ವಸ್ತಿಕ [೬] ಪ್ರಸ್ತರ [೭] ಕಾರ್ಮುಕ [೮] ಚತುರ್ಮುಖ. ಬಹುಶಃ ಅವುಗಳ ಆಕಾರದ ಮೇಲಿಂದ ಈ ಹೆಸರುಗಳು ಕೊಡಲ್ಪಟ್ಟವೆ. ದಂಡಕವೆಂದರೆ ಕೋಲಿನ ಆಕಾರದ ಗ್ರಾಮ; ಪದ್ಮಕವೆಂದರೆ ಕಮಲದ ಆಕಾರದ ಗ್ರಾಮ; ಕಾರ್ಮುಕವೆಂದರೆ ಬಿಲ್ಲಿನ ಆಕಾರದ ಗ್ರಾಮ. ಪ್ರಸಿದ್ಧ ಇತಿಹಾಸಜ್ಞನಾದ ಏರಿಯನ್ [Arian]ನೂ ಚೀನ ಪ್ರವಾಸಿಯಾದ ಹುಯೆನ್‌ಸಾಂಗನೂ ನಮ್ಮ ದೇಶದ ಹಳ್ಳಿಗಳನ್ನೂ ಪಟ್ಟಣ

ಗಳನ್ನೂ ಸ್ತುತಿಸಿದ್ದಾರೆ. ಹಿಂದಿನ ಕಾಲದಲ್ಲಿ ಪಾಟಲಿಪುತ್ರ [ಈಗಿನ ಪಾಟ್ನಾ]ವು ಎಲ್ಲಕ್ಕೂ ದೊಡ್ಡ ಪಟ್ಟಣವಾಗಿತ್ತು ಅದರ ಉದ್ದ ಳತೆ ೧೦ ಮೈಲು ಅಗಲ ೨ ಮೈಲುಗಳು. ಸುತ್ತಲು ೬೦೦ ಫೂಟು ಅಗಲವಾದ ಮತ್ತು ೩೦ ಫೂಟು ಆಳವಾದ ಕಂದಕವಿತ್ತು. ಅಲ್ಲದೆ ಸುತ್ತಲು ದೊಡ್ಡದೊಂದು ಕೋಟೆಯ ಗೋಡೆ. ಅದರಲ್ಲಿ ೫೭೦ ಕೊತ್ತಳಗಳು. ಈ ಕೋಟೆಗೆ ೬೪ ಮಹಾದ್ವಾರಗಳು ಇದ್ದವು. [Mc Crindle- Arian- India ಪುಟ ೧೮]

---

## ೧೮ನೆಯ ಪ್ರಕರಣ

## ಭೂಮಿಯ ಮೇಲಿನ ಒಡೆತನವು ಯಾರದು?



ರಾಷ್ಟ್ರದೊಳಗಿನ ಯಾವತ್ತು ಭೂಮಿಗಳು ಮತ್ತು ಪ್ರಜೆಗಳು ಯಾರ ಒಡೆತನಕ್ಕೆ ಅಧೀನಪಟ್ಟವುಗಳೆಂಬ ಪ್ರಶ್ನೆಯು ರಾಜಕಾರಣ ಶಾಸ್ತ್ರದಲ್ಲಿ ಮಹತ್ವದ್ದಿರುತ್ತದೆ. ಅವುಗಳಿಗೆಲ್ಲ ಅರಸನು ಒಡೆಯನೆಂದು ಒಂದು ಪಕ್ಷದವರ ಅಂಬೋಣ. ತದ್ವಿರುದ್ಧವಾಗಿ ಅರಸನು ಪ್ರಜೆಗಳ ಸೇವಕನು, ಪ್ರಜೆಗಳೇ ಭೂಮಿಯ ನಿಜವಾದ ಒಡೆಯರು; ಅರಸನು ಈ ಪ್ರಜೆಗಳಿಂದ ಕರಗಳನ್ನು ತೆಗೆದುಕೊಳ್ಳುವುದು ಕೇವಲ ತನ್ನ ಕಾರ್ಯಕ್ಕೋಸ್ಕರ. ಸಂಬಳ- ಎಂದು ಮತ್ತೊಂದು ಪಕ್ಷದವರ ಅಭಿಪ್ರಾಯ. ನಮ್ಮ ದೇಶದ ತಜ್ಞರಲ್ಲಿ ಈ ವಿಷಯವಾಗಿ ಏನು ಅಭಿಪ್ರಾಯವಿರುತ್ತದೆಂಬುದನ್ನು ನೋಡುವ. ನಮ್ಮ ದೇಶದ ತಜ್ಞರಲ್ಲಿಯೂ ಈ ವಿಷಯವಾಗಿ ಮೇಲ್ಕಾಣಿಸಿದಂತೆ ಭಿನ್ನಾಭಿಪ್ರಾಯಗಳಿದ್ದದ್ದು ಕಂಡು ಬರುತ್ತದೆ. ಮೀಮಾಂಸಕಾರನಾದ ಜೈಮಿನಿಯೇ ಮುಂತಾದವರು ಹೇಳುವುದೇನೆಂದರೆ ಚಕ್ರವರ್ತಿ ಅರಸನಿಗೇ ಆಗಲಿ, ಮಾಂಡಲಿಕ ಅರಸನಿಗೇ ಆಗಲಿ ತನ್ನ ತಂದೆ, ತಾಯಿ, ಮಕ್ಕಳು, ಆಳುಗಳು ಇವರೇ ಮುಂತಾದವರ ಮೇಲಾಗಲಿ, ತನ್ನ ಕೈಕೆಳಗಿನ ಪ್ರಜೆಗಳ ಮೇಲಾಗಲಿ ಅಥವಾ ತನ್ನ ರಾಜ್ಯದ ಭೂಮಿಯ ಮೇಲಾಗಲಿ

ಯಾವ ತರದ ಒಡೆತನದ ಹಕ್ಕು ಇರುವುದಿಲ್ಲ. ತನ್ನ ಪ್ರಜೆಗಳ ಸಂರಕ್ಷಣೆಗೋಸ್ಕರ ವೇತನವೆಂದು ಆತನು ಅವರಿಂದ ಕರ ಅಥವಾ ಬಲಿಯನ್ನು ತೆಗೆದುಕೊಳ್ಳುತ್ತಾನೆ. ವಸ್ತುತಃ ಯಾವತ್ತು ಭೂಮಿಗೆ ಮತ್ತು ಅದರೊಳಗಿನ ನೈಸರ್ಗಿಕ ಸಂಪತ್ತಿಗೆ ಮುಖ್ಯ ಒಡೆಯರು ಪ್ರಜೆಗಳು. [ಮೀಮಾಂಸಾ ಸೂತ್ರ ೬-೭-೨]. ಇದರಿಂದ, ನಮ್ಮ ದೇಶದಲ್ಲಿ ಅರಸನು ಭೂಮಿಯ ಅಥವಾ ಪ್ರಜೆಗಳ ಒಡೆಯನಲ್ಲವೆಂಬ ತತ್ವವು ಮಾನ್ಯವಾಗಿತ್ತೆಂದು ತೋರುತ್ತದೆ. ಭೂಮಿಯಿಂದ ಸರಕಾರಕ್ಕೆ ಸಲ್ಲತಕ್ಕ ಹಣವು ಕಂದಾಯವೋ ಅಥವಾ ಭೂಮಿಯ ಹಿಡುವಳಿ ಹಣ [Rent]ವೋ ಎಂಬ ಪ್ರಶ್ನೆಯು ಅದರ ಒಡೆತನದ ಪ್ರಶ್ನೆಯನ್ನವಲಂಬಿಸಿರುತ್ತದೆ. ಅರಸು ಮತ್ತು ಪ್ರಜೆಗಳೊಳಗಿನ ಸಂಬಂಧವು ಅವರೊಳಗಿನ ಕರಾರಿನ ಮೇಲೆ ಅವಲಂಬಿಸಿರುತ್ತದೆಂದು ನಮ್ಮಲ್ಲಿಯ ರಾಜನೀತಿ ಶಾಸ್ತ್ರಜ್ಞರ ಅಭಿಪ್ರಾಯವು. ಅರಸನು ಪ್ರಜೆಗಳ ಸಂರಕ್ಷಣೆಗೋಸ್ಕರ ಪ್ರಜೆಗಳಿಂದ ಭೂಮಿಯ ಉತ್ಪನ್ನದ ೧/೬ ಭಾಗವನ್ನು ವೇತನವೆಂದು ತೆಗೆದುಕೊಳ್ಳಬೇಕೆಂದು ಬೌಧಾಯನನು ಅಭಿಪ್ರಾಯ ಪಡುತ್ತಾನೆ. ಶುಕ್ರ [೧. ೧೮೮] ನಂತೂ ಈ ವಿಷಯವನ್ನು ಮತ್ತಿಷ್ಟು ಸ್ಪಷ್ಟವಾಗಿ ಹೇಳುತ್ತಾನೆ. ಸ್ವಭಾಗದ ವೇತನವನ್ನು ತೆಗೆದುಕೊಂಡು ಪ್ರಜೆಗಳ ಸೇವೆಯನ್ನು ಮಾಡುವುದಕ್ಕೋಸ್ಕರ ಬ್ರಹ್ಮದೇವನು ರಾಜನನ್ನು ಉತ್ಪನ್ನಮಾಡಿರುವನು. ತಾನು ಒಡೆಯನೆಂದು ತಿಳಿದುಕೊಂಡು ಪ್ರಜೆಗಳ ರಕ್ಷಣ ಮತ್ತು ವಿವರ್ಧನ ಮಾಡುವುದಕ್ಕೋಸ್ಕರ ಆತನನ್ನು ಉತ್ಪನ್ನ ಮಾಡಿರುವುದಿಲ್ಲ. ಸಾರಾಂಶ, ಅರಸನೂ ಮಿಕ್ಕ ಸೇವಕರಂತೆ ಪ್ರಜೆಗಳ ಒಬ್ಬ ಮುಖ್ಯ ಸೇವಕನಲ್ಲದೆ ಯಜಮಾನನಲ್ಲ. ಬಹಳ ಪ್ರಾಚೀನ ಕಾಲದಲ್ಲಿ ಅರಸನು ಪ್ರಜೆಗಳನ್ನು ಸಂರಕ್ಷಿಸುವ ತನ್ನ ಕರ್ತವ್ಯವನ್ನು ಯೋಗ್ಯ ರೀತಿಯಿಂದ ಜರುಗಿಸದಿದ್ದರೆ, ಜಾನಪದವು ಹಾನಿಯುಂಟಾದ ಪ್ರಜೆಗಳಿಗೆ ಅರಸನಿಂದ ಹಾನಿಯನ್ನು ಕೊಡಿಸುತ್ತಿದ್ದಿತು. ಅಭಿಷೇಕಕಾಲದ ಪ್ರತಿಜ್ಞೆಯಲ್ಲಿ, ರಾಜ್ಯವು ಆತನ ಕೈಯಲ್ಲಿ ನಿಧಿ [Trustee] ಎಂದು ಕೊಡಲ್ಪಟ್ಟಿದೆಂಬ ಮಾತು ಹೇಳಲ್ಪಟ್ಟಿದೆ. ಆದ ಕಾರಣ, ದುಷ್ಟರನ್ನು ಶಿಕ್ಷಿಸು

ವುದಕ್ಕೂ ಶಿಷ್ಟರನ್ನು ರಕ್ಷಿಸುವುದಕ್ಕೂ ಮಾತ್ರವೇ ಆತನಿಗೆ ಅಧಿಕಾರ. ಪ್ರಜೆಗಳಿಂದ ಕರಗಳನ್ನು ತೆಗೆದುಕೊಳ್ಳುವುದೂ ಅಪರಾಧಿಗಳಿಂದ ದಂಡವನ್ನು ತೆಗೆದುಕೊಳ್ಳುವುದೂ ಈ ಉದ್ದೇಶಕ್ಕೋಸ್ಕರ ಮಾತ್ರ. ನಮ್ಮಲ್ಲಿಯ ಕಾಯದೆ ಪಂಡಿತರ ಅಭಿಪ್ರಾಯವೂ ಮೀಮಾಂಸಾಕಾರರ ಅಭಿಪ್ರಾಯದಂತೆಯೇ ಇರುತ್ತದೆ. ಒಬ್ಬ ಅರಸನು ಮತ್ತೊಂದು ರಾಜ್ಯವನ್ನು ಗೆದ್ದುಕೊಂಡ ಮಾತ್ರಕ್ಕೆ ಆ ಜಿತರಾಷ್ಟ್ರದ ಅರಮನೆ ಭೂಮಿ ಇವುಗಳಿಗೆಲ್ಲಕ್ಕೂ ಆತನು ಒಡೆಯನಾಗುವುದಿಲ್ಲ. ನೀಲಕಂಠನೆಂಬ ಚಾಣಾಕ್ಷ ರಾಜನೀತಿ ಶಾಸ್ತ್ರಜ್ಞನು ಈ ವಿಷಯವನ್ನು ಕುರಿತು ಹೇಳುವುದೇನೆಂದರೆ- ಜಿತರಾಷ್ಟ್ರದಲ್ಲಿ ಮುಂಚೆ ಇದ್ದ ಅರಸನಿಗೆ ಎಷ್ಟು ಹಕ್ಕುಗಳಿದ್ದವೋ ಅವಕ್ಕಿಂತ ಹೆಚ್ಚಿಗೆ ಹಕ್ಕುಗಳು ಆ ಗೆದ್ದುಕೊಂಡ ಅರಸನಿಗೆ ಪ್ರಾಪ್ತವಾಗಲಾರವು. ಜಿತರಾಷ್ಟ್ರದ ಅರಸನಿಗೆ ರಾಜ್ಯದ ಒಡೆತನದ ಹಕ್ಕು ಇರದೆ ಪ್ರಜೆಗಳಿಂದ ಕರವನ್ನು ತೆಗೆದುಕೊಳ್ಳುವ ಹಕ್ಕು ಮಾತ್ರವೇ ಇದ್ದರೆ, ಜಯಿಸಿದವನಿಗೆ ಆ ಹಕ್ಕು ಮಾತ್ರವೇ ಪ್ರಾಪ್ತವಾಗುತ್ತದಲ್ಲದೆ ಒಡೆತನದ ಹಕ್ಕು ಪ್ರಾಪ್ತವಾಗಲಾರದು. ನೀಲಕಂಠ, ಮಾಧವ, ವಿಜ್ಞಾನೇಶ್ವರ ಮುಂತಾದ ಪ್ರಸಿದ್ಧ ಧರ್ಮಶಾಸ್ತ್ರಕಾರರು [Lawyers] ಅರಸನಿಗೆ ತನ್ನ ರಾಜ್ಯದೊಳಗಿನ ಭೂಮಿಯನ್ನು ದಾನವಾಗಿಯಾಗಲಿ ಮಾರಲಿಕ್ಕಾಗಲಿ ಕೊಡುವ ಅಧಿಕಾರವಿದ್ದಿಲ್ಲವೆಂದು ಹೇಳಿರುತ್ತಾರೆ. ತನ್ನ ಖಾಸಗಿ ಭೂಮಿಯನ್ನು ಮಾತ್ರ ಆವನು ಹಾಗೆ ಕೊಡಬಹುದು.

ಇದಕ್ಕೆ ವಿರುದ್ಧವಾದ ಅಭಿಪ್ರಾಯವುಳ್ಳವರೂ ಕೆಲವರಿರುವರು. ಅವರು ತಮ್ಮ ವಿರುದ್ಧ ಅಭಿಪ್ರಾಯಕ್ಕೆ ಅಂದರೆ ಅರಸನು ರಾಜ್ಯದೊಳಗಿನ ಭೂಮಿಗೆ ಒಡೆಯನೆಂಬ ಅಭಿಪ್ರಾಯಕ್ಕೆ ಕೌಟಿಲ್ಯನ ಅರ್ಥಶಾಸ್ತ್ರದೊಳಗಿನ ಕೆಳಗಿನ ಶ್ಲೋಕವನ್ನು ಆಧಾರವಾಗಿ ಇಟ್ಟುಕೊಂಡಿರುವರು. ಅದು ಯಾವುದೆಂದರೆ—

**ರಾಜಾ ಭೂಮೇಃ ಪತಿರ್ದೃಷ್ಟಃ ಶಾಸ್ತ್ರಜ್ಞೈರುದಕಸ್ಯ ಚ ।**
**ತಾಭ್ಯಾಮನ್ಯತ್ರ ಯದ್ದ್ರವ್ಯಂ ತತ್ರ ಸಾಮ್ಯಂ ಕುಟುಂಬಿನಾಂ ॥**

ಆದರೆ, ಮೂಲತಃ ಈ ಶ್ಲೋಕವು ಅರ್ಥಶಾಸ್ತ್ರದೊಳಗಿನ ಶ್ಲೋಕವೇ ಅಲ್ಲ. ಅರ್ಥಶಾಸ್ತ್ರದ ಮೇಲಿನ ಟೀಕೆಯಲ್ಲಿ ಟೀಕಾಕಾರನು ಈ ಶ್ಲೋಕವನ್ನು ಕೊಟ್ಟಿರುವನು. ಅಲ್ಲದೆ, ಮೇಲಿನ ಶ್ಲೋಕದಲ್ಲಿ 'ಪತಿ' ಶಬ್ದಾರ್ಥವು ಒಡೆಯನೆಂದಾಗದೆ ಕೇವಲ ಸಂರಕ್ಷಕನೆಂದು ಆಗುತ್ತದೆ. ಈ ವಿಷಯವನ್ನು ಪಂಡಿತ ಕೆ. ಪಿ. ಜಯಸ್ವಾಲ ಇವರು ತಮ್ಮ ಪುಸ್ತಕದಲ್ಲಿ ಚೆನ್ನಾಗಿ ಸ್ಪಷ್ಟೀಕರಿಸಿರುವರು. ಡಾ. ವಿನ್ಸೆಂಟ ಸ್ಮಿಥನೊಬ್ಬನ ಹೊರತಾಗಿ ಮಿಕ್ಕ ಪಾಶ್ಚಿಮಾತ್ಯ ಪಂಡಿತರೂ ಇದೇ ತರಹದ ಅಭಿಪ್ರಾಯವುಳ್ಳವರಾಗಿದ್ದಾರೆ. ಮೈಸೂರ ಇತಿಹಾಸವನ್ನು ಬರೆದ ಮಿ. ವುಯಿಲ್ಕಿನ್ಸ [Wilkins] ಇವರೂ ಡಾ. ಮ್ಯಾಕ್‌ಡೋನಾಲ್ಡ ಡಾ. ಕೀಥ್ [Keith] ಇವರೂ ಅರಸನು ಭೂಮಿಯ ಒಡೆಯನಿದ್ದಿಲ್ಲವೆಂದೇ ಅಭಿಪ್ರಾಯ ಪಟ್ಟಿರುವರು. ಆದ ಕಾರಣ ಡಾ. ವಿನ್ಸೆಂಟ ಸ್ಮಿಥ್ ಇವರ ಅಭಿಪ್ರಾಯವು ನಿರಾಧಾರವಾದುದೆಂದು ಹೇಳಬಹುದು.

---

## ೧೯ನೆಯ ಪ್ರಕರಣ

# ಪರರಾಷ್ಟ್ರೀಯ ಸಂಬಂಧ ಮತ್ತು ರಾಜಕಾರಣ

ನಮ್ಮ ದೇಶದ ರಾಜನೀತಿ ಶಾಸ್ತ್ರದಲ್ಲಿ ಮೇಲಿನ ವಿಷಯಕ್ಕೆ ಬಹಳ ಮಹತ್ವವು ಕೊಡಲ್ಪಟ್ಟಿತ್ತು. ಇದಕ್ಕೆ ಕಾರಣವೇನೆಂದರೆ- ನಮ್ಮ ದೇಶದಲ್ಲಿ ಪ್ರತಿಯೊಂದು ರಾಜ್ಯವು ಸ್ವತಂತ್ರ ರಾಜ್ಯವಾಗಿತ್ತು. ಆದಕಾರಣ ಈ ರಾಜ್ಯಗಳು ತಮ್ಮ ತಮ್ಮೊಳಗಿನ ಸಂಬಂಧವನ್ನು ಗೊತ್ತುಪಡಿಸಿಕೊಳ್ಳುವುದು ಅಗತ್ಯವೇ ಆಗಿತ್ತು. ಈ ವಿಶಾಲವಾದ ದೇಶದಲ್ಲಿಯ ಈ ಚಿಕ್ಕ ಚಿಕ್ಕ ರಾಜ್ಯಗಳು ತಮ್ಮ ತಮ್ಮೊಳಗಿನ ಸಂಬಂಧವನ್ನು ಉದಾರ ಧೋರಣದಿಂದ ನಿಶ್ಚಯಿಸಿಕೊಳ್ಳದಿದ್ದರೆ ಆಗುತ್ತಲೇ ಇರಲಿಲ್ಲ. ಈ ದೇಶದ ರಾಜರು ಹಿಂದುಸ್ಥಾನದ ಹೊರಗಿನ ದೇಶಗಳೊಡನೆಯೂ ಅನೇಕ ಸಲ ಒಪ್ಪಂದಗಳನ್ನು ಮಾಡಿಕೊಂಡಿರುವರು.

ಉದಾ- ಅಶೋಕ, ಚಂದ್ರಗುಪ್ತ ಮತ್ತು ನಮ್ಮ ಕರ್ನಾಟಕದ ಪುಲಿಕೇಶಿ ಮುಂತಾದವರು ಹೀಗೆ ಪರದೇಶದ ಅರಸರೊಡನೆ ಒಪ್ಪಂದಗಳನ್ನು ಮಾಡಿಕೊಂಡಿದ್ದರು.

ಪರರಾಷ್ಟ್ರೀಯ ರಾಜಕೀಯ ಧೋರಣವನ್ನು ನಿಶ್ಚಯಿಸುವುದಕ್ಕೋಸ್ಕರ ಅರಸರಲ್ಲಿ ನಾಲ್ಕು ವರ್ಗಗಳು ಮಾಡಲ್ಪಟ್ಟಿದ್ದವು. [೧] ಅರಿ [೨] ಮಿತ್ರ [೩] ಮಧ್ಯಮ [೪] ಉದಾಸೀನ. ಇವರಲ್ಲಿ ಪುನಃ [೧] ಸಹಜ [೨] ಕೃತ್ರಿಮಗಳೆಂದು ಒಳಭೇದಗಳಿದ್ದವು. ಸಾಮಾನ್ಯವಾಗಿ ನೆರೆಯ ಅರಸನು 'ಸಹಜಅರಿ'ಯೆಂದು ತಿಳಿಯಲ್ಪಡುತ್ತಿದ್ದನು. ಕಾರಣವಿಲ್ಲದೆ ನೆರೆಯ ಅರಸನನ್ನು ಪೀಡಿಸಿದರೆ ಆತನು ಕೃತ್ರಿಮ ಅರಿಯೆಂದು ಗಣಿಸಲ್ಪಡುತ್ತಿದ್ದನು. ಬಹಳ ದಿವಸಗಳಿಂದ ತನಗೆ ಸಹಾಯ ಮಾಡುತ್ತ ಬಂದ ರಾಜನು ಉತ್ತಮ ಮಿತ್ರನು. ಇಬ್ಬರು ಶತ್ರುಗಳ ನಡುವೆ ಇದ್ದ ಅರಸನು ಮಧ್ಯಮ ರಾಜನು. ಏಕೆಂದರೆ ಪ್ರಸಂಗ ಬಂದಾಗ ಒಬ್ಬನ ವಿರುದ್ಧ ಮತ್ತೊಬ್ಬನಿಗೆ ಸಹಾಯ ಮಾಡಲು ಆತನಿಗೆ ಶಕ್ತಿಯಿತ್ತು. ಇಬ್ಬರು ಶತ್ರುಗಳ ನಡುವಿದ್ದರೂ ಇಬ್ಬರಿಗೂ ಸಹಾಯಮಾಡಲು ಶಕ್ತಿಯಿಲ್ಲದ ಅರಸನು ಉದಾಸೀನನು. ಅರ್ಥಶಾಸ್ತ್ರದಲ್ಲಿ ಈ ಬಗ್ಗೆ ಹೆಚ್ಚಿಗೆ ವಿವರಗಳು ಕೊಡಲ್ಪಟ್ಟಿವೆ. ಇವರ ಸಂಬಂಧದಿಂದ ಆರು ತರಹದ ರಾಜಕೀಯ ಧೋರಣವನ್ನು ಸ್ವೀಕರಿಸಬಹುದು. [೧] ಸಂಧಿ [೨] ವಿಗ್ರಹ [೩] ಆಸನ– ತಟಸ್ಥವೃತ್ತಿ [೪] ಯಾನ– ಯುದ್ಧದ ಸಿದ್ಧತೆ [೫] ಸಂಶ್ರಯ- ಮಿತ್ರತ್ವವನ್ನು ಸಂಪಾದಿಸುವುದು [೬] ದ್ವೈಧೀಭಾವ ಅಂದರೆ ಕಪಟ ವರ್ತನ.

ಪ್ರಾಚೀನ ಕಾಲದ ವಾತವ್ಯಾಧಿ ಎಂಬ ರಾಜನೀತಿಶಾಸ್ತ್ರಜ್ಞನು ಸಂಧಿ ಮತ್ತು ವಿಗ್ರಹಗಳೆಂದು ಎರಡೇ ಧೋರಣಗಳನ್ನು ಹೇಳಿರುವನು. ಆದರೆ ಚಾಣಾಕ್ಷನಾದ ಚಾಣಕ್ಯನು ಮೇಲ್ಕಾಣಿಸಿದಂತೆ ಆರು ತರಹದ ಧೋರಣಗಳನ್ನು ಹೇಳಿರುವನು.

ಈ ಧೋರಣಗಳನ್ನು ಅಮಲಿನಲ್ಲಿ ತರುವುದಕ್ಕೆ [೧] ಸಾಮ [೨] ದಾನ [೩] ದಂಡ [೪] ಭೇದಗಳೆಂಬ ನಾಲ್ಕು ಉಪಾಯಗಳಿದ್ದವು.

ಸಂಧಿಗಳಲ್ಲಿ ಎರಡು ಭೇದಗಳು [೧] ಸಮಸಂಧಿ [೨] ಹೀನ ಸಂಧಿ. ಸಮಸಂಧಿಯಿಂದ ಇಬ್ಬರಿಗೂ ಲಾಭ. ಹೀನ ಸಂಧಿಯಲ್ಲಿ ದುರ್ಬಲ ರಾಜನಿಗೆ ಪ್ರಬಲರಾಜನ ಸಲುವಾಗಿ ಅನೇಕ ಕಾರ್ಯಗಳನ್ನು ಮಾಡಬೇಕಾಗುತ್ತಿತ್ತು. ಸಂಧಿಯ ಕರಾರುಗಳಂತೆ ನಡೆಯುತ್ತೇವೆಂದು ಇಬ್ಬರಿಗೂ ಪ್ರತಿಜ್ಞೆಯನ್ನು ಮಾಡಬೇಕಾಗುತ್ತಿತ್ತು; ಅಲ್ಲದೆ ಪ್ರತಿಭೂ ಅಂದರೆ ಯೋಗ್ಯ ಜಾಮೀನದಾರರನ್ನು ಕೊಡಬೇಕಾಗುತ್ತಿತ್ತು. ಅಥವಾ ತಮ್ಮ ಮನೆತನದ ಕೆಲವು ಜನರನ್ನು ಪರಸ್ಪರವಾಗಿ ವಶದಲ್ಲಿ ಇಡಬೇಕಾಗುತ್ತಿತ್ತು. ಯಾವನೊಬ್ಬ ಅರಸನು ಸಂಧಿಯ ಕರಾರುಗಳನ್ನು ಮುರಿಯುತ್ತಾನೆಂದು ಸಂದೇಹವುಂಟಾದರೆ, ಹಾಗೆ ಮುರಿಯುವದಿಲ್ಲವೆಂದು ಆತನು ಬೆಂಕಿ, ಬಂಗಾರ ಅಥವಾ ಮತ್ತಾವುದೊಂದು ವಸ್ತುವನ್ನು ಹಿಡಿದು ಆಣೆಯನ್ನು ತೆಗೆದುಕೊಳ್ಳಬೇಕಾಗುತ್ತಿತ್ತು. ಮತ್ತು ಒಮ್ಮೊಮ್ಮೆ ತನ್ನ ಹೆಂಡರು ಮಕ್ಕಳನ್ನು ಸಹ ವಶದಲ್ಲಿ ಇಡಬೇಕಾಗುತ್ತಿತ್ತು. ಚಾಣಕ್ಯನು ಸತ್ಯ ಪ್ರತಿಜ್ಞೆಯ ಮೂಲಕ ಮಾಡಲ್ಪಟ್ಟ ಸಂಧಿಗೆ ಚಲಸಂಧಿಯೆಂದೂ ಜಾಮೀನು ಕೊಟ್ಟು ಮಾಡಿದ ಸಂಧಿಗೆ ಸ್ಥಾವರ ಸಂಧಿಯೆಂದೂ ಕರೆಯುತ್ತಾನೆ. ಚಾಣಕ್ಯನು ಚಲ ಸಂಧಿಗೆ ಹೆಚ್ಚಿಗೆ ಮಹತ್ವ ಕೊಟ್ಟಿರುವನು. ಏಕೆಂದರೆ ಅದರಿಂದ ಇಹಲೋಕದಲ್ಲಿ ಮಾತ್ರವಲ್ಲದೆ ಪರಲೋಕದಲ್ಲಿ ಕೂಡ ಮನುಷ್ಯನು ಬದ್ಧನಾಗುತ್ತಾನೆ.

ಪರರಾಷ್ಟ್ರಗಳೊಡನೆ ಮಾಡತಕ್ಕ ವ್ಯವಹಾರವು ದೂತರ ಅಥವಾ ವಕೀಲರ ಮುಖಾಂತರವಾಗಿ ಮಾಡಲ್ಪಡುತ್ತಿತ್ತು. ದೂತ ಅಥವಾ ವಕೀಲನು ಪರರಾಷ್ಟ್ರದ ಅರಸರ ರಾಜ್ಯದಲ್ಲಿ ಕಾಯಂ ಇರುತ್ತಿದ್ದಿಲ್ಲ. ಹೀಗೆ ಕಾಯಂ ನಿಲ್ಲುವ ಪದ್ಧತಿಯು ಇತ್ತೀಚಿನದು. ಆವರವರ ಕರ್ತವ್ಯಗಳ ಮೇರೆಗೆ ದೂತರಲ್ಲಿ ನಾಲ್ಕು ವಿಧಗಳು: [೧] ನಿಸೃಷ್ಟಾರ್ಥ ದೂತ– ಪರರಾಷ್ಟ್ರದೊಡನೆ ಕಾರಸ್ಥಾನ ಮಾಡುವುದಕ್ಕೋಸ್ಕರ ಕಳುಹಿಸಲ್ಪಟ್ಟ ಮಂತ್ರಿ [೨] ದೂತ– ಪರರಾಷ್ಟ್ರಕ್ಕೆ ಕಳುಹಿಸಲ್ಪಟ್ಟ ವಕೀಲ [೩] ಪರಿಮಿತಾರ್ಥದೂತ– ಯಾವುದೊಂದು ವಿಶಿಷ್ಟ ಕಾರ್ಯಕ್ಕೋಸ್ಕರ ಕಳುಹಿಸಲ್ಪಟ್ಟ ದೂತ [೪] ಶಾಸನಹರ ದೂತ– ಪರರಾ

ಷ್ಟ್ರದ ಅರಸರಿಗೆ ಮುಟ್ಟಿಸುವುದಕ್ಕೆ ಸಂದೇಶಗಳನ್ನು ಒಯ್ದ ದೂತ. ಈ ದೂತರಿಗೆ ಅರಸರಿಂದ ವಿಶೇಷ ಹಕ್ಕುಗಳಿದ್ದವು. ಅವರನ್ನು ಯಾರೂ ತಡೆಯತಕ್ಕದ್ದಲ್ಲ. ಅವರನ್ನು ತಮ್ಮ ರಾಜ್ಯದ ಹೊರಗೆ ಸುರಕ್ಷಿತವಾಗಿ ತಲುಪಿಸತಕ್ಕದ್ದು. ಅವರು ಅವಧ್ಯರು.

**ಶಕ್ತಿಯ ಸಮತೋಲವು**– [Balance of Power] ಹಿಂದಿನ ಕಾಲದಲ್ಲಿ, ಯಾವ ಅರಸನೂ ಮಿಕ್ಕವರಿಗಿಂತ ಹೆಚ್ಚು ಬಲಾಢ್ಯನಾಗದಂತೆ ಎಲ್ಲರೂ ಎಚ್ಚರ ಪಡುತ್ತಿದ್ದರು. ಯಾರಾದರೂ ಹಾಗೆ ಪ್ರಬಲರಾಗಲು ಯತ್ನಿಸಿದರೆ ಮಿಕ್ಕವರು ತಮ್ಮ ತಮ್ಮೊಳಗೆ ಒಕ್ಕಟ್ಟು ಮಾಡಿಕೊಂಡು ಆತನ ಪ್ರಾಬಲ್ಯವನ್ನು ಮುರಿಯುತ್ತಿದ್ದರು. ಇದರಿಂದ ಅವರಲ್ಲಿ ಯಾವಾಗಲೂ ಸಮತೋಲವು ಉಳಿಯುತ್ತಿತ್ತು.

---

## ೨೦ನೆಯ ಪ್ರಕರಣ

# ಜಿತರಾಷ್ಟ್ರಗಳ ಬಗ್ಗೆ ಧೋರಣ ಮತ್ತು ಉಪಸಂಹಾರ

ಒಂದು ರಾಷ್ಟ್ರವು ಮತ್ತೊಂದು ರಾಷ್ಟ್ರವನ್ನು ಗೆದ್ದುಕೊಂಡಾಗ ಆ ಜಿತರಾಷ್ಟ್ರದ ಆಡಳತೆಯು ಅದೇ ಅರಸನಿಗೆ ಒಪ್ಪಿಸಲ್ಪಡುತ್ತಿತ್ತು. ಆದರೆ ಆ ಅರಸನು ಜಯಹೊಂದಿದ ಅರಸನ ಸಾರ್ವಭೌಮತ್ವವನ್ನು ಒಪ್ಪಬೇಕಾಗುತ್ತಿತ್ತು. ಹಾಗೆ ಅವನು ಒಪ್ಪದಿದ್ದರೆ ಮಾತ್ರ ಆ ಪಟ್ಟದ ಮೇಲೆ ಆ ಅರಸನ ಮನೆತನದ ಮತ್ತೊಬ್ಬ ರಾಜಪುತ್ರನನ್ನು ಕುಳ್ಳಿರಿಸುತ್ತಿದ್ದರು. ಈ ವಿಷಯವಾಗಿ ಮನುಸ್ಮೃತಿಯಲ್ಲಿ ಹೇಳಿರುವದೇನೆಂದರೆ–

ಯಾವದೊಂದು ಪ್ರದೇಶವನ್ನು ಗೆದ್ದ ಬಳಿಕ ಜಯಶಾಲಿಯಾದ ರಾಜನು ಜಿತರಾಷ್ಟ್ರದೊಳಗಿನ ದೇವತೆಗಳನ್ನು ಪೂಜಿಸಬೇಕು; ಸಚ್ಛೀ

ಲರಾದ ಬ್ರಾಹ್ಮಣರಿಗೆ ಸನ್ಮಾನ ಮಾಡಬೇಕು; ಪ್ರಜೆಗಳಿಗೆ ಹೊಸ ಹಕ್ಕುಗಳನ್ನು ಕೊಡಬೇಕು; ಮತ್ತು ಎಲ್ಲರ ಜೀವಿತಗಳೂ ಆಸ್ತಿಯೂ ಸಂರಕ್ಷಿಸಲ್ಪಡುವವೆಂದು ಡಂಗುರ ಹೊಡೆಯಬೇಕು. ಆದರೆ ಅಲ್ಲಿಯ ಪ್ರಜೆಗಳು ಒಪ್ಪಿದರೆ ಜಿತರಾಜನ ಆಪ್ತರಲ್ಲಿ ಯಾರನ್ನಾದರೂ ಪಟ್ಟಕ್ಕೆ ಕುಳ್ಳಿರಿಸಿ ತನ್ನ ಕರಾರುಗಳು ಪಾಲಿಸಲ್ಪಡುವವೆಂಬ ಬಗ್ಗೆ ಅವನಿಂದ ವಚನವನ್ನು ತೆಗೆದುಕೊಳ್ಳಬೇಕು. [ಮನುಸ್ಮೃತಿ ಅ. ೭ ಶ್ಲೋಕ ೨೦೯-೨೦೨] ಚಾಣಕ್ಯನು ತನ್ನ ಅರ್ಥಶಾಸ್ತ್ರದಲ್ಲಿ ಹೆಚ್ಚಿನ ವಿವರಗಳನ್ನು ಕೊಟ್ಟಿರುವನು. ಜಿತ ರಾಷ್ಟ್ರದಲ್ಲಿಯ ಜನರಿಗೆ ಉತ್ತಮ ಪ್ರಕಾರದ ಸುರಕ್ಷಿತತೆಯನ್ನು ಕೊಟ್ಟು ಅವರಲ್ಲಿ ಪೂರ್ಣ ವಿಶ್ವಾಸವನ್ನು ಹುಟ್ಟಿಸಬೇಕು. ಹೊಸ ರಾಜನ ವಿರುದ್ಧ ಅಲ್ಲಿಯ ಜನರು ಬಂಡು ಮಾಡಲು ಪ್ರವೃತ್ತರಾದರೆ ಮುಖಂಡರಿಗೆ ಇನಾಮುಗಳನ್ನೂ ಪ್ರಜೆಗಳಿಗೆ ಕರಗಳ ಮಾಫಿಯನ್ನೂ ಕೊಟ್ಟು ಶಾಂತತೆಯನ್ನು ಪ್ರಸ್ಥಾಪಿಸಬೇಕು. ಜಿತರಾಷ್ಟ್ರದೊಳಗಿನ ನಡತೆ ರೀತಿಗಳಲ್ಲಿಯೂ ರೂಢಿಗಳಲ್ಲಿಯೂ ಭಾಷೆಯಲ್ಲಿಯೂ ಉಡುಪಿನಲ್ಲಿಯೂ ಕೈಹಾಕಕೂಡದು; ಆ ರಾಷ್ಟ್ರದೊಳಗಿನ ರಾಷ್ಟ್ರೀಯ ಸಾಮಾಜಿಕ ಮತ್ತು ಧಾರ್ಮಿಕ ಸಮಾರಂಭ ಮತ್ತು ಉತ್ಸವಗಳ ಬಗ್ಗೆ ಆದರವನ್ನು ತೋರಿಸಬೇಕು. ಅಲ್ಲಿಯ ಸಾಧು ಸಜ್ಜನರನ್ನು ಸನ್ಮಾನಪೂರ್ವಕವಾಗಿ ನಡಿಸಿಕೊಳ್ಳಬೇಕು. ಮತ್ತು ವಿದ್ವಾಂಸ ಜನರಿಗೂ ಪ್ರಖ್ಯಾತ ವಕ್ತೃಗಳಿಗೂ ಧರ್ಮಗುರುಗಳಿಗೂ ಕರದ ಮಾಫಿಯನ್ನು ಕೊಟ್ಟು ಪ್ರಸಂಗ ವಿಶೇಷಗಳಲ್ಲಿ ದೊಡ್ಡ ದೊಡ್ಡ ಇನಾಮುಗಳನ್ನೂ ಭೂಮಿಯ ಕಾಣಿಕೆಗಳನ್ನೂ ಕೊಡಬೇಕು. ಸೆರೆಮನೆಯೊಳಗಿನ ಸೆರೆಯಾಳುಗಳನ್ನು ಬಿಟ್ಟು ಕೊಡಬೇಕು. ಮತ್ತು ದೀನರಿಗೂ ಸಂಕಟದಲ್ಲಿದ್ದವರಿಗೂ ಸಹಾಯ ಮಾಡಬೇಕು. ಸರಕಾರದ ವಸೂಲಿಗೆ ಘಾತಕವಾಗುವ ಮತ್ತು ಅಡ್ಡ ಬರುವ ನಡೆನಡಾವಳಿಗಳನ್ನೂ ಯೋಗ್ಯ ಮತ್ತು ಉತ್ತಮ ರೀತಿಯಿಂದ ರಾಜ್ಯಕಾರಭಾರವನ್ನು ನಡೆಸುವದಕ್ಕೆ ತೊಂದರೆ ಕೊಡುವ ನಡೆನಡಾವಳಿಗಳನ್ನೂ ನಿಲ್ಲಿಸಿ ಬಿಡಬೇಕು. ಮತ್ತು ಅವುಗಳ ಬದಲು ಉತ್ತಮವಾದ ಕಾಯಿದೆಗಳನ್ನೂ ರೂಢಿಗಳನ್ನೂ ಸ್ಥಾಪಿಸಬೇಕು. [ಅರ್ಥಶಾಸ್ತ್ರ ಪುಸ್ತಕ ೧೩. ಅಧ್ಯಾಯ ೧]

ಈ ಬಗೆಯಾಗಿ ನಾವು ಪ್ರಾಚೀನ ರಾಜ್ಯಪದ್ಧತಿಗಳ ವಿಷಯವಾಗಿ ಸಾಮಾನ್ಯವಾಗಿ ಗೊತ್ತಿರಬೇಕಾದ ಸಂಗತಿಗಳನ್ನು ಅತಿ ಸಂಕ್ಷೇಪವಾಗಿ ಹೇಳಿದೆವು. ಇದರಿಂದ, ನಮ್ಮ ಪ್ರಾಚೀನ ರಾಜ್ಯಪದ್ಧತಿಗಳು ಯಾವಾಗಲೂ ಸುಂದರವಾಗಿಯೇ ಇದ್ದವೆಂದೂ ಅವುಗಳಲ್ಲಿ ದೋಷಗಳು ಇದ್ದೇ ಇಲ್ಲವೆಂದೂ ಯಾರೂ ತಿಳಿಯಬಾರದು. ಹಾಗೆ ಹೇಳುವುದು ನಮ್ಮ ಉದ್ದೇಶವಲ್ಲ. ಆ ಪದ್ಧತಿಗಳಲ್ಲಿ ಅನೇಕ ದೋಷಗಳು ಇದ್ದವು, ಅಲ್ಲದೆ ಅವುಗಳನ್ನು ಕಾರ್ಯತಃ ಜ್ಯಾರಿಯಲ್ಲಿ ತರುವಾಗಂತೂ ಅನೇಕ ತಪ್ಪುಗಳಾಗುತ್ತಿದ್ದವು. ಹಾಗೆ ಆಗುವುದು ಮನುಷ್ಯಸ್ವಭಾವಕ್ಕೆ ಅನುಸರಿಸಿದುದೇ ಸರಿ. ಆದರೆ ಹಿಂದೆ ಹೇಳಿದ ಸಂಗತಿಗಳಿಂದ ಒಂದು ಮಾತನ್ನು ಓದುಗರ ನಿದರ್ಶನಕ್ಕೆ ತಂದು ಕೊಡುವುದು ನಮ್ಮ ಮುಖ್ಯ ಉದ್ದೇಶವಾಗಿದೆ. ಅದಾವುದೆಂದರೆ, ನಮ್ಮ ದೇಶದಲ್ಲಿಯ ರಾಜ್ಯ ಪದ್ಧತಿಗಳು ಆಯಾ ಕಾಲಕ್ಕೆ ತಕ್ಕಂತೆ ವಿಕಾಸ ಹೊಂದುತ್ತಲೇ ಬಂದಿದ್ದವೆಂಬುದು. ನಮ್ಮ ಜನರು ರಾಜಕಾರಣವನ್ನು ದುರ್ಲಕ್ಷಿಸಿರಲಿಲ್ಲ. ಇಷ್ಟೇ ಅಲ್ಲ; ಆ ಸಂಬಂಧವಾಗಿ ದೀರ್ಘ ವಿಚಾರವನ್ನೂ ಮಾಡಿರುವರು. ಅನೇಕ ಗ್ರಂಥಗಳನ್ನೂ ಬರೆದಿರುವರು. ಈ ವಿಷಯದ ಕಡೆಗೆ ನಮ್ಮ ಜನರ ಲಕ್ಷವು ಹೋಗಿ ದಿನದಿನಕ್ಕೆ ಹೆಚ್ಚಿಗೆ ಶೋಧಗಳುಂಟಾದರೆ, ಮುಂದಿನ ರಾಜ್ಯದ ಆಡಳಿತದ ಸ್ವರೂಪವನ್ನು ನಿಶ್ಚಯಿಸುವುದಕ್ಕೆ ಹೆಚ್ಚಿಗೆ ಅನುಕೂಲವಾಗುವುದು.

**—: ಸಂಪೂರ್ಣ :—**

# ಶಬ್ದಕೋಶ.



| | |
|---|---|
| ಅನುಮತಿ ಪತ್ರ | =Permit. |
| ಅರಸುತನ, ಅರಸೊತ್ತಿಗೆ | =Monarchy |
| ಅಲ್ಪಜನಸತ್ತೆ | =Oligarchy |
| ಈಶಾನ | =President |
| ಉಪಧಾ | =Means of test |
| ಉಪನಿಧಿ | =Deposit |
| ಒಳಮಂಡಳ | =Inner Cabinet |
| ಕಂಟಕಶೋಧನ | =Criminal |
| ಕಡ್ಡಾಯವಾಗಿ | =Compulsorily |
| ಕಾರುಕರಕ್ಷಣ | =Protection of artists |
| ಕಾರ್ಯನಿರ್ವಾಹಕ ಅಧಿಕಾರ | =Executive power |
| ಕೋಷ್ಠಾಗಾರ | =Stores |
| ಗಣರಾಜ್ಯ | =Republic |
| ಗುಲ್ಮ | =Group of Villages, Company |
| ಗ್ರಾಮಣಿ | =President of ಗ್ರಾಮಸಭಾ |
| ಘಟಕಾವಯವ | =Unit |
| ಚಕ್ಷುಷ್ಮಾನ್ | =Foresighted |
| ಛಂದ | =Vote |
| ಜನ | =Nation |
| ಜಾನಪದ | =Peoples representative Institution or Republic |
| ತೀರ್ಥ | =Officer |
| ದ್ವೈರಾಜ್ಯ | =Duel Government |

| | |
|---|---|
| ದ್ರೋಣಮುಖ | =District |
| ದೇವಾಂಶಸಂಭೂತತ್ವ | =Divine right of Kings |
| ಧರ್ಮಸ್ಥೀಯ | =Civil Court |
| ಧರ್ಮ | =Law |
| ನಾಯಕ | =Commander in Chief |
| ಪರಿಚ್ಛದ ಅಮಾತ್ಯ | =Departmental Head |
| ಪಿತೃಪ್ರಧಾನ ಕುಟುಂಬ ವ್ಯವಸ್ಥೆ | =Patriarchial form of family |
| ಪುನರ್ನ್ಯಾಯ | =Appeal |
| ಪೌತವಾಧ್ಯಕ್ಷ | =Superintendent of Wei- =ghts |
| ಪೌರ | =Representative Institution of Town |
| ಪ್ರಕೃತಿ | =People |
| ಪ್ರತಿಜ್ಞೆ | =Resolution |
| ಪ್ರತಿಭೂ | =Surety |
| ಪ್ರತ್ಯಾಖ್ಯಾನ | =Vetoing power |
| ಪ್ರಾಡ್‌ವಿವಾಕ್ | =Chief Justice |
| ಮಹಾಜನ ಸತ್ತೆ | =Aristocracy |
| ಮಂತ್ರಿಮಂಡಳ | =Cabinet |
| ಮಂತ್ರಿಪರಿಷತ್ತು | =Council of Ministers |
| ಮಂತ್ರಧರ | =Cabinet Minister |
| ಮೌಲ | =Regular Army |
| ಮಾತೃಪ್ರಧಾನ ಕುಟುಂಬವ್ಯವಸ್ಥೆ | =Matriarchial form of family |
| ಯುದ್ಧ ಸಚಿವ | =Minister for War |

| | |
|---|---|
| ರಾಜ್ಯಾಧಿಪತ್ಯ, ರಾಜ್ಯಾಧಿಕಾರ | =Soverignity |
| ರಾಜ್ಯ ಸಂಸ್ಥೆ | =Government |
| ರಾಜ್ಯಯಂತ್ರ | =Machinery of Government |
| ರಾಜ್ಯಶಾಸನ | =Political power |
| ರಾಜಕೃತ್ | =King Maker |
| ವಾರ್ತಾಶಾಸ್ತ್ರ | =Economics |
| ವೈರಾಜ್ಯ | =States without Kings |
| ವಿಧಾಯಕ ಕಾಯದೆ | =Positive Laws |
| ಲೋಕಸಭೆ | =Parliament |
| ಶಲಾಕಾಗ್ರಹಣ | =Voting by ballot |
| ಶಾಸನ ಪದ್ಧತಿ | =Constitution |
| ಸಂಗ್ರಹಣ | =Taluk place |
| ಸಭೆ | =Peoples Managing Committee |
| ಸಮಿತಿ | =Parliament, National Assembly |
| ಸಮ್ಮಿಶ್ರ ರಾಜ್ಯ | =Composite State |
| ಸಾಹಸಾಧಿಕಾರಿ | =Police officer |
| ಸೇವಿಕಾ | =Nurse |
| ಸ್ತಂಭವರ್ಗ | =No-tax campaigners |
| ಸ್ಥಾನೀಯ | =Province |
| ಜ್ಞಪ್ತಿ | =Motion |

# ಆಧಾರ ಗ್ರಂಥಗಳು


| | | |
|---|---|---|
| 1 | Studies in Ancient Hindu Polity. | N. N. Law. |
| 2 | Public administration in Ancient India. | P. Bonerji. |
| 3 | The State | W. Wilson. |
| 4 | Ancient India. | Rapson. |
| 5 | Ancient Hindu Polity. | K. P. Jayaswal. |
| 6 | Economic Life in ancient India. | M. A. Buch. |
| 7 | Spirit of Ancient Hindu Culture. | do. |
| 8 | Vicissitudes of Aryan Civilization | Kunte. |
| 9 | Hindu Political Theories. | U. N. Ghosal. |
| 10 | Evolution of Indian Polity. | R. Shamsastry. |
| 11 | Aspects of Ancient Indian Polity. | N. N. Law. |
| 12 | Local Self-Government in Ancient India | Mukerji |
| 13 | Sources of Law & Society in Ancient India. | N. C. Sen. |
| 14 | History of Ancient India. | Roy Choudhari |
| 15 | Political Institutions and Theories of the Hindus. | B. K. Sarkar. |
| 16 | Inter-state Relations in Ancient India. Part I. | N. N. Law. |

17 Economic Life. & Progress in Ancient India. — N. C. Bonerji

18 Indo–Aryans. — R. Mitra

19 Kautiliya Artha Shastra. ( English Translation ) — R. Shastry

20 Asoka — V. A. Smith.

21 Indo Aryan Polity. — Basu.

22 Indian Historical Quarterly.

೨೩ ಕಾಮಂದಕೀಯ ನೀತಿಸಾರ — (ಸಂಸ್ಕೃತ)

೨೪ ಶುಕ್ರನೀತಿಸಾರ — ,,

೨೫ ಮನುಸ್ಮೃತಿ — ,,

೨೬ ಮಹಾಭಾರತ — ,,

೨೭ ಅಗ್ನಿಪುರಾಣ — ,,

೨೮ ಗೌತಮ ಧರ್ಮಸೂತ್ರ




## ಹೊಸ ಆಶ್ರಯದಾತರೇ ಮುಂತಾದವರ ಹೆಸರುಗಳು.

**ಆಶ್ರಯದಾತರು**

ಶ್ರೀ. ಗುಂಡಾಚಾರ್ಯ ಪುರಾಣಿಕ
,, ವ್ಹಿ. ಎನ್. ಅಡವಿ ಕರನ್ಸಿ ಆಫೀಸರ ಕರಾಚಿ

**ಪೋಷಕರು**

,, ಮಧ್ವರಾವ ಕುಲಕರ್ಣಿ
,, ಭೀಮರಾವ ರಾಮರಾವ ದೇಶಪಾಂಡೆ ನಂದೇಶ್ವರ
,, ಗುರುರಾವ ಸಿಡೇನೂರ
,, ನಾರಾಯಣರಾವ ರಾಘವೇಂದ್ರ ದೇಶಪಾಂಡೆ
,, ಶ್ರೀನಿವಾಸರಾವ ಕವಜಲಗಿ
,, ಬೆಲಡೋಣಿ ಭೀಮರಾವ
,, ಬಸೆಟ್ಟೆಪ್ಪಾ ದೊಡ್ಡಬಸಪ್ಪಾ ತಟ್ಟಿ ಲಕ್ಷ್ಮೇಶ್ವರ

**ಚಂದಾದಾರರು**

,, ಎಸ್. ಪಿ. ಗಾವಕರ ಬಿ. ಎ. ಹುಬ್ಬಳ್ಳಿ
,, ರಾಯನಗೌಡ ಮಾರ್ತಾಂಡಗೌಡ ಪಾಟೀಲ ಕುರ್ತಕೋಟಿ
,, ಗೋಪಾಳರಾವ ನವಲಿ, ಗದಗ
,, ಸಂಗನಗೌಡ ಪಾಟೀಲ ಗದಗ

ಶ್ರೀ. ಭೀಮರಾವ ವ್ಹಿ. ಪೋತದಾರ, ಹಾನಗಲ್ಲ
,, ಶಿವಲಿಂಗಪ್ರಭು ದೇಸಾಯಿ ರುದ್ರಾಪುರ ಬೆಳಗಾಂವಿ
,, ಬಿ. ಎ. ದೇಶಪಾಂಡೆ ಬೆಳಗಾಂವಿ
,, ಗೋಪಾಳ ಜೀವಾಜಿ ಸುರಪುರ ಕಾಗವಾಡ
,, ಆರ್. ಆರ್. ಮಹಾಜನ, ಆಥಣಿ
,, ಹುಚ್ಚಯ್ಯಾ ಎಫ್. ಕಟ್ಟೀಮನಿ ಬಾಗಲಕೋಟಿ
,, ಹಣಮಂತರಾವ ಛೆಬ್ಬಿ ಬಾದಾಮಿ
,, ವಿಠ್ಠಲರಾವ ಕವತಾಳ, ಬಾದಾಮಿ
ಸೆಂಟ್ರಲ್ ಹಾಯಸ್ಕೂಲ ಮಡಿಕೇರಿ
,, ಎಸ್. ಶ್ರೀನಿವಾಸಯ್ಯ ಭಾಗಮಂಡಲ
,, ಎಸ್. ಬಸಪ್ಪಾ, ಕಾಫಿ ಪ್ಲ್ಯಾಂಟರ ಸುಂಟಿಕೊಪ್ಪ
,, ಎಸ್. ಬಸಪ್ಪಾ ಮಡಿಕೇರಿ
,, ಕೆ. ಎಸ್. ಕರಿಬಸಪ್ಪಾ ಕೊಡೇಪೇಟ

ಶ್ರೀ. ಎನ್. ವೆಂಕಟೇಶ ಅಯ್ಯಂಗಾರ ಬೆಂಗಳೂರ
ಎಂ. ಬಿ. ಟಿ. ನಾರಾಯಣ ಕೋಲಾರ ಗೋಲ್ಡ್ ಫೀಲ್ಡ್
ಶಿವಮೂರ್ತಿಸ್ವಾಮಿ ಹುಲಕುಂಟೆಮಠ ತುಮಕೂರು
ಪ್ರೊ॥ ಕೆ. ಜಿ. ಕುಂದಣಗಾರ ಕೊಲ್ಹಾಪೂರ
ರಾಜಾರಾಮ ಕಾಲೇಜ ಕೊಲ್ಹಾಪೂರ
,, ವ್ಹಿ. ಎಚ್. ನಾಗರಹಳ್ಳಿ ವ್ರಯಿಲಿಂಗ್ಡನ್ ಕಾಲೇಜ
ಪ್ರೊ. ವ್ಹಿ. ಬಿ. ನಾಯಕ ವ್ರಯಿಲಿಂಗಡನ್ ಕಾಲೇಜ
ಶ್ರೀ. ರಾಮರಾವ ಮಂಗಸೂಳಿ ಶಿರಹಟ್ಟಿ
,, ಅಶ್ವತ್ಥರಾವ ಮಹಿಷಿ ಶಿರಹಟ್ಟಿ
ಕರ್ನಾಟಕ ವಾಚನಾಲಯ ತರುಣಸಂಘ ಕಲಬುರ್ಗಿ
ಪಂಡಿತ ಕೇಶವಯ್ಯಂಗಾರ ಎಂ. ಎ. ಎಂ. ಆರ್. ಎ ಎಸ್. ಕಲಬುರ್ಗಿ
,, ಅಲಂಪುರ ಮಧ್ವರಾವ ಗದ್ವಾಲ
,, ಭೀಮಸೇನರಾವ ತವಗ ಕಲಬುರ್ಗಿ

ಶ್ರೀ. ಬಸವಂತರಾವ ವಕೀಲ ಕಲಬುರ್ಗಿ
,, ವೀರಶೈವ ಬಂಧು ಸಮಾಜ ಕಲಬುರ್ಗಿ
,, ಧ್ರುವರಾವ ಡಾಕ್ಟರ ಜೇವರಿಗಿ
,, ಕಪಟ್ರಾಳ ಕೃಷ್ಣರಾವ ಕಲಬುರ್ಗಿ
,, ವಾಜೇಂದ್ರರಾವ ಮಾಸ್ತರ ಕಲಬುರ್ಗಿ
,, ರಂಗಾಚಾರ್ಯ ಜೋಶಿ ಕಲಬುರ್ಗಿ
,, ಅಶ್ವತ್ಥರಾವ ಬಲಕುಂದಿ ಕಲಬುರ್ಗಿ
,, ಹಳ್ಳೇರಾವ ಮಾಸ್ತರ ಬಿ. ಎ. ಯಾದಗಿರಿ
,, ಜನಾರ್ದನರಾವ ದೇಸಾಯಿ ಹೈದ್ರಾಬಾದ
,, ಎಸ್. ಎಸ್. ಭಟ್. ಅಗ್ರಿಕಲ್ಚರ ಕಾಲೇಜ ಪುಣೆ
,, ಆರ್. ಎಸ್. ಪಂಚಮುಖಿ ಮದ್ರಾಸ
,, ನಾರಾಯಣ ತಿಮ್ಮಾಜಿ ಅಮ್ಮಿನಭಾವಿ ಲಾಡಖಾನ
,, ವೆಂಕಟರಾವ ಕುಲಕರ್ಣಿ
,, ಕೆ. ವ್ಹಿ. ಕುಲಕರ್ಣಿ

ಶ್ರೀ. ಶ್ಯಾಮರಾವ ತಟ್ಟಿ
,, ರಾಘವೇಂದ್ರರಾವ ಮುತಾಲೀಕ ದೇಸಾಯಿ
,, ಎಸ್. ಎಸ್. ಸಿಂಧೆ
,, ವೆಂಕಟರಮಣಾಚಾರ್ಯ ಶಿರಹಟ್ಟಿ
,, ರಾಮಾಚಾರ್ಯ ಏರಿ ಪೀಪಲ್ಸ ಲಾಯಬ್ರರಿ
,, ಕಾಂತರಾವ ಕಮಲಾಪುರ
,, ರಘುನಾಥರಾವ ಹೆಬ್ಬಳ್ಳೀಕರ
ಪ್ರೊ. ಟಿ. ಎಂ. ಪಾಟೀಲ
,, ಆರ್. ವ್ಹಿ. ಜಹಾಗೀರದಾರ
ಶ್ರೀ. ಬಸಪ್ಪಾ ದಾನಪ್ಪ ಬಾಳಿ
,, ಭಗೀರಥರಾವ ದೇಶಪಾಂಡೆ
,, ವೆಂಕಟರಾವ ಮುಗದಾಳ
,, ಕೆ. ಎಂ. ನವರತ್ನ
,, ಡಿ. ಪಿ. ಕರಮರಕರ
,, ಶಂಕರಭಟ್ಟ ಅಣ್ಣೀಗೇರಿ
,, ಜಿ. ಎಸ್. ಕುಲಕರ್ಣಿ
,, ರಾಮರಾವ ಮಹಿಷಿ
,, ರಾಮರಾವ ಪೇರೂರ
,, ಗೋವಿಂದರಾವ ಬುರ್ಲಿ
,, ಹೆಡ್ಡಮಾಸ್ತರ ಗವರ್ನಮೆಂಟ ಹಾಯಸ್ಕೂಲ
,, ಗುರುರಾವ ಆಲೂರ
,, ಟಿ. ವಿ. ಭಂಡಿವಾಡ
,, ಎನ್. ಬಿ. ನಾಡಗೇರ.

ಶ್ರೀ ಆರ್. ಬಿ. ಸಂಕಣ್ಣವರ. ರಾಜಾರಾಮ ಕಾಲೇಜ
,, ಬಿ. ಎಮ್. ಗುಡಿಗೇರಿ ರಾಜಾರಾಮ ಕಾಲೇಜ
,, ಸಿ. ಎಮ್. ಹಿರೇಮಠ ರಾಜಾರಾಮ ಕಾಲೇಜ
,, ಸಿ. ಆರ್. ಪುಂಗನೂರ ರಾಜಾರಾಮ ಕಾಲೇಜ
,, ಜಿ. ಎಲ್. ಮಳಲಿ ರಾಜಾರಾಮ ಕಾಲೇಜ
,, ಸಿ. ಜಿ. ಕಾಜಗಾರ ರಾಜಾರಾಮ ಕಾಲೇಜ
,, ಎ. ಎ. ಧೂಲಾಶೆಟ್ಟಿ ರಾಜಾರಾಮಕಾಲೇಜ
,, ಬಿ. ಎಫ್ ಪಟ್ಟಣಶೆಟ್ಟಿ ರಾಜಾರಾಮ ಕಾಲೇಜ
,, ಜಿ. ಬಿ. ಧರಿಯಣ್ಣವರ ರಾಜಾರಾಮ ಕಾಲೇಜ
,, ಎ. ಆಯ್. ಗುತ್ತಿಗೊಳ ರಾಜಾರಾಮ ಕಾಲೇಜ
,, ಎಸ್. ಬಿ. ಜವಳಿ ರಾಜಾರಾಮ ಕಾಲೇಜ
,, ಎಸ್. ಜಿ. ಹೀರೆಮಠ ರಾಜಾರಾಮ ಕಾಲೇಜ
,, ಎಸ್. ಆಯ್. ಪಾಟೀಲ ರಾಜಾರಾಮ ಕಾಲೇಜ
,, ವ್ಹಿ. ವ್ಹಿ. ವಣರೊಟ್ಟಿ ರಾಜಾರಾಮ ಕಾಲೇಜ

ಶ್ರೀ ಎಮ್. ಎಸ್. ಡಂಗಿ: ಸಬ್
ಓವ್ಹರಸೀಅರ. ಕೊಲ್ಹಾಪೂರ.
ಡಾ. ಎಮ್. ಸಿ- ಚಿಕ್ಕಮಠ ವ್ಹೆಟ
ರ್ನರಿ ಸರ್ಜನ್ ಕೊಲ್ಹಾಪೂರ
ಶ್ರೀ. ಎನ್. ಕೆ. ಸಂಗನಾಳಮಠ
ರಾಜಾರಾಮ ಕಾಲೇಜ
,, ಆಯ್. ಸಿ. ವಾಲಿ
ರಾಜಾರಾಮ ಕಾಲೇಜ
,, ಕೆ. ಜಿ. ಜೋಶೀ ರಾಜಾರಾಮ
ಕಾಲೇಜ
,, ಪಿ. ಎಚ್. ರಾಯಚೂರ
ಆಗರಖೇಡ
,, ಆರ್. ಸಿ. ಪಾಟೀಲ ವುಯಿಲಂ
ಗಡನ್ ಕಾಲೇಜ
,, ಎಸ್. ಬಿ. ಕುಲಕರ್ಣಿ ವುಯಿ
ಲಂಗಡನ್ ಕಾಲೇಜ
,, ಡಿ. ಏ. ಸವರ ಜೋಶಿ
,, ಕೆ. ಟಿ. ಬೆಂಗಳೂರ ವುಯಿಲಂ
ಗಡನ್ ಕಾಲೇಜ
,, ಎಮ್. ಜಿ. ಹಾವರಗಿ ವುಯಿ
ಲಂಗಡನ್ ಕಾಲೇಜ
,, ಎ. ಎನ್. ಪಾಟೀಲ ವುಯಿಲಂ
ಗಡನ್ ಕಾಲೇಜ
,, ಎಸ್. ಎಲ್. ಪಾಟೀಲ ವುಯಿ
ಲಂಗಡನ್ ಕಾಲೇಜ
,, ಆರ್. ಎಮ್. ಕೆಂಚನಗೌಡರ

ಶ್ರೀ ಪಿ.ಬಿ.ಹಾವನೂರ ಮುಂಬಯಿ
,, ಟಿ. ವ್ಹಿ. ಕಟ್ಟಿ ಗೊವನಕೊಪ್ಪ
ಸೇ. ಸೋ. ಕೊಣ್ಣೂರ
,, ಗೋವಿಂದ ಲಕ್ಷಮಣ ಕುಲ
ಕರ್ಣಿ ಶಾಳಾಮಾಸ್ತರ ಕೊಣ್ಣೂರ
,, ಎಮ್. ಸಿ. ಪುರಂದರೆ ಕೆರೂರ
,, ಎಸ್. ಎನ್. ಯರಗಲ್ಲ ವುಯಿ
ಲಂಗಡನ್ ಕಾಲೇಜ
,, ಸಿ. ಎಸ್. ಶಿವಪ್ಪಗೌಡರ
ವುಯಿಲಂಗಡನ್ ಕಾಲೇಜ
,, ವಿ. ಜಿ. ಬಿರಾದಾರ ವುಯಿಲಂ
ಗಡನ್ ಕಾಲೇಜ
,, ಎಸ್. ಸಿ. ಕುರ್ಲೆ ವುಯಿಲಂ
ಗಡನ್ ಕಾಲೇಜ
,, ಎಸ್. ಎಸ್. ಮಂಗಸೂಳಿ
ವುಯಿಲಂಗಡನ್ ಕಾಲೇಜ
,, ಎ. ಜಿ. ಹೊಳೆಯಮಣ್ಣವರ
ವುಯಿಲಂಗಡನ್ ಕಾಲೇಜ
,, ಬಿ. ಟಿ. ಪಾಟೀಲ ವುಯಿಲಂಗ
ಡನ್ ಕಾಲೇಜ
,, ಆರ್. ಎಸ್. ಸೆಟ್ಲೂರ
ವುಯಿಲಂಗಡನ್ ಕಾಲೇಜ
,, ಎಲ್. ಎ. ಕಟ್ಟಿ ವುಯಿಲಂಗ
ಡನ್ ಕಾಲೇಜ
ಪ್ರೊ. ಟಿ. ಕೆ. ತುಕೋಳ ಫರ್ಗ್ಯು
ಸನ್ ಕಾಲೇಜ
ಶ್ರೀ ಎಸ್. ಟಿ. ಮೂಲಗತ್ತಿ.
ಮರ್ಢೇಕರ ಬಂಗ್ಲೆ ಪುಣೆ

ಶ್ರೀ ಪಿ. ಎಸ್. ಗೊಜನೂರ
ಮರ್ಡೆಕರ ಬಂಗ್ಲೆ ಪುಣೆ
,, ಎನ್. ಎಸ್. ದೇಶಪಾಂಡೆ
ಡೆಕ್ಕನ ಕಾಲೇಜ ಪುಣೆ
,, ಡಿ. ಎಸ್. ದೊಡ್ಡಮನಿ
ಡೆಕ್ಕನ ಕಾಲೇಜ
ಪ್ರೊ. ಜಿ. ಬಿ. ಪಟವರ್ಧನ ಬಳ
ವಂತ ಭವನ ಪುಣೆ ೪.
ಶ್ರೀ ಎಸ್. ಟಿ. ಪಪ್ಪು ಪುಣೆ
,, ವ್ಹಿ. ಸಿ. ಹೆದ್ದುರಶೆಟ್ಟಿ ಫರ್ಗ್ಯು
ಸನ್ ಕಾಲೇಜ
,, ಎಚ್. ಕೆ. ಕುಲಕರ್ಣಿ ಫರ್ಗ್ಯು
ಸನ್ ಕಾಲೇಜ
ಪ್ರೊ. ವ್ಹಿ. ಕೆ ಗೋಕಾಕ ಫರ್ಗ್ಯು
ಸನ್ ಕಾಲೇಜ

ಶ್ರೀ. ಆರ್. ಎಫ್. ಪಾಟೀಲ
ಲಾ ಕಾಲೇಜ
,, ಮುರಗೆಪ್ಪಾ ನಾಗನೂರ.
B. A. ಲಾ ಕಾಲೇಜ
,, ಎಚ್. ಸಿ. ಅಂಗಡಿ.
B. A. (Hon) ಲಾ ಕಾಲೇಜ
ಪ್ರೊ. ಎಲ್. ಸಿ. ಕುಲಕರ್ಣಿ
ಅಗ್ರಿಕಲ್ಚರಲ್ ಕಾಲೇಜ
ಶ್ರೀ. ಬಿ. ರಾಮಚಂದ್ರರಾವ
ಲಾ ಕಾಲೇಜ
,, ಎಸ್. ಸಿ. ಕುಲಕರ್ಣಿ
,, ಬಿ. ಎಸ್. ಕರ್ಜಗಿ ವಿಜಾಪುರ
,, ಎಮ್. ಕೆ. ಚಿನ್ನಮುಳಗುಂದ
,, ಬಿ. ಸಿ. ಪಾಟೀಲ B. A. LL. B.
ಸಬ್‌ಜಜ್, ಕೋರೆಗಾಂವ.



# ತಿದ್ದುಪಡಿ



| ಪುಟ | | ಸಾಲು | | ಶುದ್ಧ |
|---|---|---|---|---|
| ಸಂಪಾದಕರ ಮುನ್ನುಡಿ | | | | |
| ೧ | .... | ೨೫ | .... | ಆದರೆ |
| ೨ | .... | ೮ | .... | ಧ್ಯೇಯ |
| ಅನುಕ್ರಮಣಿಕೆ | .... | ೯ | .... | ಸಂಸ್ಥೆ |
| ೬ | .... | ೧೪ | .... | ಮತ್ತು ಪ್ರಾಕೃತ |
| ೮ | .... | ೯ | .... | ಒಂದವು |
| ೧೦ | .... | ೧೯ | .... | ಕಾಲವೆಂದು |
| ೧೧ | .... | ೧೨ | .... | ವೇನೆಂದರೆ |
| ೧೬ | .... | ೧೨ | .... | ಮುಖ್ಯಸ್ಥನು |
| ೧೭ | .... | ೯ | .... | ಮುಖ್ಯಸ್ಥ |
| ೨೨ | .... | ೨ | .... | ಸಂಸ್ಥೆ |
| ೩೨ | .... | ೬ | .... | ಸಂರಕ್ಷಿಸುವುದಕ್ಕೆ |
| ೪೫ | .... | ೧೭ | .... | ಆಕರಾಧ್ಯಕ್ಷನೂ (ಆಕರಾಧ್ಯಕ್ಷನು ಇದರ ಬದಲು) |
| ,, | .... | ೧೯ | .... | ಅಧಿಕಾರಿಯೂ (ಅಧಿಕಾರಿ ಇದರ ಬದಲು) |
| ೪೯ | .... | ೬ | .... | ಸ್ಥಿರತೆ |
| ,, | .... | ೧೫ | .... | ಪ್ರಶಾಸ್ತ್ರ |
| ,, | .... | ೨೧ | .... | ೧೪೪೦೦೦ |
| ೫೦ | .... | ೧೩ | .... | ಪರಿಷತ್ |
| ೫೧ | .... | ೧೦ | .... | ರಾಜಾಧಿಪತ್ಯವನ್ನು |
| ೬೭ | .... | ೧೮ | .... | ಲಿಖಿತ |
| ೮೯ | .... | ೮ | .... | ರಸ್ತೆಯ |
| ೧೦೩ | .... | ೧ | .... | ಜಿತರಾಷ್ಟ್ರ |